*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ – ***IV-A*** | ಬೆಂಗಳೂರು, ಸೋಮವಾರ, ನವೆಂಬರ್ ೨೫, ೨೦೧೩ (ಮಾರ್ಗಶಿರ ೪, ಶಕ ವರ್ಷ ೧೯೩೫) | ನಂ. ೧೨೮೫ |
| ***Part – IV-A*** | ***Bangalore, Monday, November 25, 2013 (Margashira 4, Shaka Varsha 1935)*** | ***No. 1285*** |

## *HIGH COURT OF KARNATAKA*

### *NOTIFICATION*

### *NO. HCE 554/2013, Bangalore, DATED 25TH NOVEMBER 2013*

In exercise of the powers conferred by Article 229 (1) and (2) of the Constitution of India, read with Rule 6,7 and 11 High Court of Karnataka Service (Conditions of Service and Recruitment) Rules, 1973 and all other powers enabling thereunto, Hon'ble the Chief Justice, High Court of Karnataka with the previous approval of His Excellency the Governor of Karnataka (vide Government Order No LAW 190 LCE 2013 dated 19.11.2013) makes the following rules to amend the High Court of Karnataka Service (Conditions of Service and Recruitment) Rules, 1973 (hereinafter referred to as Principal Rules):-

***Title and commencement: (1)*** These Rules may be called as the High Court of Karnataka Service (Conditions of Service and Recruitment) (VI Amendment) Rules, 2013.

(2) They shall come into force on the date of the publication in the Karnataka Gazette.

***Amendment to Schedule-II***

(1) Under the Heading Group-'A', in column No. 3 against Sl. No. 13 (Assistant Registrar) the figure ***"21"*** for the figure ***"18"*** shall be substituted.

(2) Under the Heading Group-'B', in column No. 3 against Sl. No. 24 (Section Officer) the figure ***"78"*** for the figure ***"72"*** shall be substituted.

(3) Under the Heading Group-'C', in column No. 3 against Sl. No. 36 (Assistant Court Secretary) the figure ***"67"*** for the figure ***"61"*** shall be substituted.

(4) Under the Heading Group-'C', in column No. 3 against Sl. No. 33 (Senior Assistant) the figure ***"62"*** for the figure ***"53"*** shall be substituted.

(5) Under the Heading Group-'C', in column No. 3 against Sl. No. 39 (First Division Assistant) the figure ***"219"*** for the figure ***"207"*** shall be substituted.

(6) Under the Heading Group-'C', in column No. 3 against Sl. No. 57 (Second Division Assistant) the figure ***"326"*** for the figure ***"301"*** shall be substituted.

(7) Under the Heading Group-'C', in column No. 3 against Sl. No. 58 (Typist) the figure ***"277"*** for the figure ***"252"*** shall be substituted.

(8) Under the Heading Group-'D', in column No. 3 against Sl. No. 69 (Office Attendant) the figure ***"62"*** for the figure ***"52"*** shall be substituted.

(9)Under the Heading Group-'D', in column No. 3 against Sl. No. 77 (Peons) the figure **"335"** for the figure **"315"** shall be substituted.

BY ORDER OF HON'BLE THE CHIEF JUSTICE,

**B.A. PATIL**

REGISTRAR GENERAL

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ - **III** | **ಬೆಂಗಳೂರು, ಸೋಮವಾರ, ನವೆಂಬರ್ ೨೫, ೨೦೧೩ (ಮಾರ್ಗಶಿರ ೪, ಶಕ ವರ್ಷ ೧೯೩೫)** | **ನಂ. ೧೨೮೬** |
| ***Part - III*** | ***Bangalore, Monday, November 25, 2013 (Margashira 4, Shaka Varsha 1935)*** | ***No. 1286*** |

## ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ ಬೆಂಗಳೂರು

**ತಿದ್ದುಪಡಿ**

**ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/51/2013-14, ಬೆಂಗಳೂರು, ದಿನಾಂಕ: 25-11-2013**

ಅಧಿಸೂಚನೆ ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/51/2013-14, ದಿನಾಂಕ: 23-11-2013ರ 5ನೇ ಸಾಲಿನಲ್ಲಿರುವ "ಕಬ್ಬಿನ ಹಾಗೂ ಕಬ್ಬಿನ ಪ್ರಾಥಮಿಕ ಉಪ ಉತ್ಪನ್ನಗಳಾದ" ಎಂಬ ಪದಗಳಿಗೆ ಬದಲಾಗಿ "ಸಕ್ಕರೆ ಹಾಗೂ ಕಬ್ಬಿನ ಪ್ರಾಥಮಿಕ ಉಪ ಉತ್ಪನ್ನಗಳಾದ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**ಎಸ್.ಎಸ್. ಪಟ್ಟಣಶೆಟ್ಟಿ**
ಸದಸ್ಯ ಕಾರ್ಯದರ್ಶಿ, ಕಬ್ಬು ನಿಯಂತ್ರಣ ಮಂಡಳಿ
ಹಾಗೂ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ
ಸಕ್ಕರೆ ನಿರ್ದೇಶಕರು

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ - **III** | **ಬೆಂಗಳೂರು, ಸೋಮವಾರ, ನವೆಂಬರ್ ೨೫, ೨೦೧೩ (ಮಾರ್ಗಶಿರ ೪, ಶಕ ವರ್ಷ ೧೯೩೫)** | **ನಂ. ೧೨೮೭** |
| ***Part - III*** | ***Bangalore, Monday, November 25, 2013 (Margashira 4, Shaka Varsha 1935)*** | ***No. 1287*** |

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಐ 283 ಎಸ್‌ಪಿಕ್ಯೂ 2009, ಬೆಂಗಳೂರು, ದಿನಾಂಕ: 25.11.2013**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966ರ ಕರ್ನಾಟಕ ಕಾಯ್ದೆ 18, 1966) ಕಲಂ 4ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 283 ಎಸ್‌ಪಿಕ್ಯೂ 2009, ದಿನಾಂಕ: 19.04.2012ನ್ನು ಕರ್ನಾಟಕ ರಾಜ್ಯ ಪತ್ರದ ಭಾಗ-3ರಲ್ಲಿ ದಿನಾಂಕ: 19.04.2012ರಂದು ಪ್ರಕಟಗೊಳಿಸಿದ್ದು, ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಗದಗ ಜಿಲ್ಲೆ, ಗದಗ ತಾಲ್ಲೂಕು, ಗದಗ ಗ್ರಾಮದ ಒಟ್ಟು 1 ಎಕರೆ 06 ಗುಂಟೆ ವಿಸ್ತೀರ್ಣವುಳ್ಳ ಅನುಸೂಚಿಯಲ್ಲಿ ತೋರಿಸಿರುವ ಸರ್ವೆ ನಂಬರ್‌ಗಳ ಜಮೀನಿಗೆ ಅನ್ವಯವಾಗುವಂತೆ ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲು ಹೊರಡಿಸಲಾಗಿದ್ದ ಅಧಿಸೂಚನೆಯನ್ನು 1897ರ ಜನರಲ್ ಕ್ಲಾಸಸ್ ಕಾಯ್ದೆಯ ಕಲಂ 21ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ರದ್ದುಪಡಿಸಿ (rescind), ಆದೇಶಿಸಲಾಗಿದೆ.

**:: ಅನುಸೂಚಿ ::**

| ಕ್ರ. ಸಂ. | ಸರ್ವೆ ನಂಬರ್ | ಕ್ಷೇತ್ರ ಎ-ಗುಂ-ಆ | ಚೆಕ್ ಬಂದಿ (ಚತುಃ ಸೀಮೆ) 28(1)ರ ಅಧಿಸೂಚನೆ ಪ್ರಕಾರ | | | |
|---|---|---|---|---|---|---|
| | | | **ಪೂರ್ವ** | **ಪಶ್ಚಿಮ** | **ಉತ್ತರ** | **ದಕ್ಷಿಣ** |
| 1. | 908 | 0-09 | 54 | 50 ಬ | 50 ಆ | 50 ಬ |
| 2. | 50/ಬಿ1ಡಿ (ಸಿ.ಟಿ.ಎಸ್. ನಂ: 3811) | 0-37 (ಸಿ.ಟಿ. ಸರ್ವೆ ರೆಕಾರ್ಡ್ ಪ್ರಕಾರ ಕ್ಷೇತ್ರ 5570 ಯಾರ್ಡ್ಸ್) | 908, 54 | 50 ಅ | 50 ಅ | ರಸ್ತೆ |
| **ಒಟ್ಟು** | | **1-06** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | **ಬೆಂಗಳೂರು, ಮಂಗಳವಾರ, ನವೆಂಬರ್ ೨೬, ೨೦೧೩ (ಮಾರ್ಗಶಿರ ೫, ಶಕ ವರ್ಷ ೧೯೩೫)** | **ನಂ. ೧೨೮೮** |
| ***Part – IV-A*** | ***Bangalore, Tuesday, November 26, 2013 (Margashira 5, Shaka Varsha 1935)*** | ***No. 1288*** |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 259 ಎಂಆರ್‌ಇ 2013(ಭಾಗ), ಬೆಂಗಳೂರು, ದಿನಾಂಕ: 23ನೇ ನವೆಂಬರ್, 2013**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1) (ix) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಮೈಸೂರು** ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಇಬ್ಬರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ.

| ಕ್ರ. ಸಂ. | **ಸದಸ್ಯರ ಹೆಸರು**<br>**ಶ್ರೀಯುತರು / ಶ್ರೀಮತಿ** |
|---|---|
| 1 | ಶ್ರೀ ಜೆ.ನಿಂಗಯ್ಯ ಬಿನ್ ಲೇಟ್ ಜವರಯ್ಯ,<br>ದುದ್ದಗೆರೆ, ವರುಣಾ ಹೋಬಳಿ, ಮೈಸೂರು |
| 2 | ಶ್ರೀ ಎಂ. ಮಂಚಯ್ಯ ಬಿನ್ ಮಲ್ಲಯ್ಯ<br>ಮೆಲ್ಲಹಳ್ಳಿ, ವರುಣಾ ಹೋಬಳಿ, ಮೈಸೂರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– **IV-A** | **ಬೆಂಗಳೂರು, ಮಂಗಳವಾರ, ನವೆಂಬರ್ ೨೬, ೨೦೧೩ (ಮಾರ್ಗಶಿರ ೫, ಶಕ ವರ್ಷ ೧೯೩೫)** | **ನಂ. ೧೨೮೯** |
| ***Part– IV-A*** | ***Bangalore, Tuesday, November 26, 2013 (Margashira 5, Shaka Varsha 1935)*** | ***No. 1289*** |

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 1 ಎಸ್‌ಎಸ್‌ಆರ್ 2013, ಬೆಂಗಳೂರು, ದಿನಾಂಕ 26ನೇ ನವೆಂಬರ್ 2013**

ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಅಧಿನಿಯಮ ಸಂಖ್ಯೆ:14)ರ 8ನೇ ಪ್ರಕರಣದೊಡನೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ ಪ್ರಕರಣ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಅದು ಪ್ರಕಟವಾದ ದಿನಾಂಕದಿಂದ 15 ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ, ಯಾವುದೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರ ಪರಿಗಣಿಸುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನ ಸೌಧ, ಬೆಂಗಳೂರು–560 001 ಇವರಿಗೆ ಕಳುಹಿಸಬಹುದು.

**ಕರಡು ನಿಯಮಗಳು**

**1. ಶಿರೋನಾಮೆ ಮತ್ತು ಪ್ರಾರಂಭ.–**

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) (. . ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಇದು ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಷೆಡ್ಯೂಲ್–*II* ರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಷೆಡ್ಯೂಲ್–IIರ ಕ್ರಮ ಸಂಖ್ಯೆ: 69 ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳಿಗೆ ಬದಲಾಗಿ ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು

| | | | |
|---|---|---|---|
| 69 | **ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ, ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ ಇಲಾಖೆ (ಆಯುಷ್)** | ನಿರ್ದೇಶಕರು, ಆಯುಷ್ ಇಲಾಖೆ , ಪ್ರಾಂಶುಪಾಲರು, ಪ್ರಾಧ್ಯಾಪಕರು, ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಆಯುಷ್ ಕಾಲೇಜಿನ ಉಪನ್ಯಾಸಕರು. ಉಪ–ನಿರ್ದೇಶಕರು (ಆಯುರ್ವೇದ/ಯುನಾನಿ, ಹೋಮಿಯೋಪತಿ/ಯೋಗ ಮತ್ತು ನ್ಯಾಚುರೋಪತಿ/ ಔಷಧ ವಿಜ್ಞಾನ, ವೈಜ್ಞಾನಾಧಿಕಾರಿ, ಹಿರಿಯ ವೈದ್ಯಾಧಿಕಾರಿ (ಆಯುಷ್), ವೈದ್ಯಾಧಿಕಾರಿ (ಆಯುಷ್), ಸಹಾಯಕ ಔಷಧ ನಿಯಂತ್ರಕರು, ಆಡಳಿತಾಧಿಕಾರಿ. | 1) ಅಕೌಂಟ್ಸ್ ಹೈಯರ್<br>(2) ಜನರಲ್ ಲಾ ಭಾಗ 1 ಮತ್ತು 2 |
| | | ವೈಜ್ಞಾನಿಕ ಸಹಾಯಕ, ಔಷಧ ನಿರೀಕ್ಷಕರು (ಆಯುರ್ವೇದ/ ಹೋಮಿಯೋಪತಿ) ಸಹಾಯಕ ಆಡಳಿತಾಧಿಕಾರಿ | (1) ಅಕೌಂಟ್ಸ್ ಹೈಯರ್<br>(2) ಜನರಲ್ ಲಾ ಭಾಗ 1 |
| | | ಶುಶ್ರೂಷ ಮೇಲ್ವಿಚಾರಕರು(ದರ್ಜೆ–I)<br>ಶುಶ್ರೂಷ ಮೇಲ್ವಿಚಾರಕರು(ದರ್ಜೆ–II)<br>ಔಷಧ ವಿಶ್ಲೇಷಕರು (ರಸಾಯನ ಶಾಸ್ತ್ರ)<br>ಔಷಧ ವಿಶ್ಲೇಷಕರು (ಸಸ್ಯ ಶಾಸ್ತ್ರ)<br>ಔಷಧ ವಿಶ್ಲೇಷಕರು (ಔಷಧ ವಿಜ್ಞಾನ)<br>ಔಷಧ ವಿಶ್ಲೇಷಕರು (ಸೂಕ್ಷ್ಮ ಜೀವಿ ಶಾಸ್ತ್ರ)<br>ಅಧೀಕ್ಷಕರು,<br>ಪ್ರಥಮ ದರ್ಜೆ ಸಹಾಯಕರು<br>ಶೀಘ್ರಲಿಪಿಗಾರರು | ಅಕೌಂಟ್ಸ್ ಹೈಯರ್ |
| | | ದ್ವಿತೀಯ ದರ್ಜೆ ಸಹಾಯಕರು | ಅಕೌಂಟ್ಸ್ ಲೋಯರ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಮಂಗಳ. ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## *Personnel and Administrative Reforms Secretariat*

### *NOTIFICATION*

### *No.DPAR 1 SSR 2013, Bangalore, Dated 26th November, 2013*

The draft of the following rules further to amend the Karnataka Civil Services (Service and Kannada Language Examinations) Rules, 1974, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore – 560 001.

***DRAFT RULES***

***1. Title and Commencement:-*** (1) These rules may be called the Karnataka Civil Services (Service and Kannada Language Examinations) (...... Amendment)Rules, 2013.

(2) They shall come into force from the date of their publication in the Official Gazette.

***2. Amendment of Schedule- II. -*** In Schedule – ***II*** to the Karnataka Civil Services (Service and Kannada Language Examinations) Rules, 1974, in the Table, for Sl.No. 69 and entries relating thereunder the following shall be substituted, namely:-

| | | | |
|---|---|---|---|
| 69. | ***Department of Ayurveda,Yoga & Naturopathy, Unani Siddha & Homeopathy (Ayush)*** | Director of Ayush Principal, Professor/ Asst Professor/ Lecturer in Govt. Ayush Colleges,<br>Deputy Director (Ayurveda/ Unani /Homeopathy/ Yoga & Naturopathy/ Pharmacy)<br>Scientific Officer,<br>Senior Medical Officer(Ayush)<br>Medical Officer (Ayush)<br>Asst.Drug Controller,<br>Administrative Officer. | (1) Accounts Higher<br>(2) General Law Part I and II |
| | | Scientific Assistant,<br>Drug Inspector, (Ayurveda/ Homeopathy) Asst. Administrative Officer. | (1) Accounts Higher<br>(2) General Law Part I |
| | | Nursing Superintendent Grade-I<br>Nursing Superintendent Grade-II<br>Drug Analyst(Chemistry)<br>Drug Analyst(Botany)<br>Drug Analyst(pharmacy)<br>Drug Analyst(Microbiology)<br>Superintendent<br>First Division Assisstant<br>Stenographer | Accounts Higher |
| | | Second Division Assisstant | Accounts Lower |

By Order and in the name of the Governor of Karnataka

***Dr. Mangala.G.S.***

Under Secretary to Government,
Department of Personnel & Administrative Reforms
(Service Rules-1)


# ವಿಶೇಷ ರಾಜ್ಯ ಪತ್ರಿಕೆ

| ಭಾಗ–***IV-A*** | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫) | ನಂ.೧೨೯೧ |
|---|---|---|
| ***Part–IV-A*** | ***Bangalore, Thursday, November 28, 2013 (Margashira 7, Shaka Varsha 1935)*** | ***No. 1291*** |


## ***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/12/LA Bill/2013, Bangalore, Dated: 28-11-2013***

The following Bill was introduced in Legislative Assembly on 28-11-2013

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಎರಡನೇ ಅಧಿವೇಶನ**

## ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 12)**

ಕೆಲವು ಅತ್ಯಾವಶ್ಯಕ ಸೇವೆಗಳ ನಿರ್ವಹಣೆಗಾಗಿ ಉಪಬಂಧ ಕಲ್ಪಿಸುವ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕೆಲವು ಅತ್ಯಾವಶ್ಯಕ ಸೇವೆಗಳ ನಿರ್ವಹಣೆ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು :-

**1. ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ :-** (1) ಈ ಅಧಿನಿಯಮವನ್ನು ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು, ಇಡೀ ಕರ್ನಾಟಕ ರಾಜ್ಯಕ್ಕೆ ಅನ್ವಯಿಸತಕ್ಕದ್ದು.

(3) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು ಹತ್ತು ವರ್ಷಗಳ ಅವಧಿಯವರೆಗೆ ಜಾರಿಯಲ್ಲಿ ಇರತಕ್ಕದ್ದು.

**2. ಪರಿಭಾಷೆಗಳು .-** (1) ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಅತ್ಯಾವಶ್ಯಕ ಸೇವೆ" ಎಂದರೆ,-

(i) ಜಲ ಅಥವಾ ಸಂದರ್ಭಾನುಸಾರವಾಗಿ ವಿದ್ಯುಚ್ಛಕ್ತಿಯ ತಯಾರಿಕೆ, ಉತ್ಪಾದನೆ, ಶೇಖರಣೆ, ಸಾಗಣೆ, ಸರಬರಾಜು ಅಥವಾ ವಿತರಣೆಗೆ ಸಂಬಂಧಪಟ್ಟ ಯಾವುದೇ ಸೇವೆ;

(ii) ಮೋಟಾರು ವಾಹನಗಳಲ್ಲಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸುವುದಕ್ಕಾಗಿ ಇರುವ ಯಾವುದೇ ಸಾರಿಗೆ ಸೇವೆ.

**ವಿವರಣೆ :-** ಈ ಖಂಡದ ಉದ್ದೇಶಗಳಿಗಾಗಿ, 'ಮೋಟಾರು ವಾಹನ" ಎಂಬ ಪದಾವಳಿಯು, ಮೋಟಾರು ವಾಹನಗಳ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59) 2ನೇ ಪ್ರಕರಣದ (28)ನೇ ಖಂಡದಲ್ಲಿ ಅದಕ್ಕೆ ಕೊಟ್ಟ ಅರ್ಥವನ್ನೇ ಹೊಂದಿರತಕ್ಕದ್ದು.

(iii) ಸಂವಿಧಾನದ ಏಳನೇ ಅನುಸೂಚಿಯ IIನೇ ಪಟ್ಟಿಯಡಿಯಲ್ಲಿ ರಾಜ್ಯ ವಿಧಾನಮಂಡಲವು ಯಾವುದರ ಸಂಬಂಧದಲ್ಲಿ ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿದೆಯೋ ಆ ಯಾವುದೇ ವಿಷಯಕ್ಕೆ ಸಂಬಂಧಿಸಿದಂತಹ ಮತ್ತು ಯಾವುದರಲ್ಲಿ ಕೆಲಸ ಮಾಡಲು ನಿರಾಕರಿಸಿದರೆ, ಯಾವುದೇ ಸಾರ್ವಜನಿಕ ಬಳಕೆ ಸೇವೆಗಳನ್ನು ಅಥವಾ ಸಾರ್ವಜನಿಕರ ಭದ್ರತೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಅಥವಾ ಸಮುದಾಯದ ಜೀವನಕ್ಕೆ ಅವಶ್ಯವಾದ ಸರಬರಾಜುಗಳನ್ನು ಹಾಗೂ ಸೇವೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ತೊಂದರೆ ಉಂಟಾಗುತ್ತದೆ ಅಥವಾ ಸಮುದಾಯವನ್ನು ಬಹಳ ಕಷ್ಟಕ್ಕೆ ಈಡು ಮಾಡುತ್ತದೆ ಎಂದು ಸರ್ಕಾರವು ಅಭಿಪ್ರಾಯಪಡುತ್ತದೋ ಅಂಥ ಯಾವುದೇ ಇತರ ಸೇವೆ ಅಥವಾ ಉದ್ಯೋಗ ಅಥವಾ ಅವುಗಳ ಯಾವುದೇ ಒಂದು ವರ್ಗವನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಅತ್ಯಾವಶ್ಯಕ ಸೇವೆ ಎಂದು ಅಧಿಸೂಚನೆಯ ಮೂಲಕ ಘೋಷಿಸಬಹುದು.

(ಬಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ ;

(ಸಿ) "ಮುಷ್ಕರ" ಎಂದರೆ, ವಹಿಸಲಾದ ಕಾರ್ಯವನ್ನು ಮುಂದುವರಿಸಲು ಅಥವಾ ಕೆಲಸವನ್ನು ಒಪ್ಪಿಕೊಳ್ಳಲು ಹಾಗೆ ನಿಯೋಜಿತರಾಗಿರುವ ಅಥವಾ ನಿಯೋಜಿಸಲಾಗುತ್ತಿರುವ ಎಷ್ಟೇ ಸಂಖ್ಯೆಯ ವ್ಯಕ್ತಿಗಳ ಗುಂಪು ಸಾಮಾನ್ಯ ಒಪ್ಪಂದದಲ್ಲಿ ಒಟ್ಟಾಗಿ ನಿರಾಕರಿಸುವುದು ಅಥವಾ ಯೋಜಿಸಿದ ಒಂದು ನಿರಾಕರಣೆ ಅಥವಾ ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ನಿಯೋಜಿತಗೊಂಡಿರುವಾಗ ವ್ಯಕ್ತಿಗಳು ಕಾರ್ಯವನ್ನು ನಿಲ್ಲಿಸುವುದು; ಮತ್ತು

(i) ಯಾವುದೇ ಅತ್ಯಾವಶ್ಯಕ ಸೇವೆಯ ನಿರ್ವಹಣೆಗೆ ಅಂಥ ಕಾರ್ಯವು ಅಗತ್ಯವಾಗಿದ್ದಲ್ಲಿ ಅವಧಿ ಮೀರಿ ಕರ್ತವ್ಯವನ್ನು ನಿರ್ವಹಿಸಲು ನಿರಾಕರಿಸುವುದು; ಮತ್ತು

(ii) ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ಕಾರ್ಯವನ್ನು ನಿಲ್ಲಿಸಲು ಅಥವಾ ಗಣನೀಯವಾಗಿ ಕುಂಠಿತಗೊಳ್ಳಲು ಪ್ರಭಾವ ಬೀರುವ ಸಂಭವವಿರುವ ಅಥವಾ ಪ್ರಭಾವ ಬೀರಿದ ಯಾವುದೇ ಇತರ ವರ್ತನೆ,

– ಇವುಗಳನ್ನು ಒಳಗೊಳ್ಳುತ್ತದೆ.

(2) (ಎ) (1)ನೇ ಉಪಪ್ರಕರಣದ (ಎ) ಖಂಡದ (iii) ನೇ ಉಪಖಂಡದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿದ್ದರೆ, ಅದನ್ನು ಹೊರಡಿಸಿದ ತರುವಾಯದ ಒಂದು ವಾರದೊಳಗಾಗಿ ಮತ್ತು ಅದು ಅಧಿವೇಶನದಲ್ಲಿಲ್ಲದಿದ್ದರೆ, ಸದನಗಳ ಮುಂದಿನ ಅಧಿವೇಶನ ಪ್ರಾರಂಭವಾದ ತರುವಾಯದ ಒಂದು ವಾರದೊಳಗಾಗಿ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಲಾದ ದಿನಾಂಕದಿಂದ ಅಥವಾ ಸಂದರ್ಭಾನುಸಾರವಾಗಿ ರಾಜ್ಯ ವಿಧಾನಮಂಡಲದ ಮರು ಅಧಿವೇಶನದಿಂದ ಅರವತ್ತು ದಿನಗಳು ಮುಕ್ತಾಯವಾದ ತರುವಾಯ, ಆ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚಿತವಾಗಿ ಅಧಿಸೂಚನೆಯನ್ನು ಹೊರಡಿಸಿದುದನ್ನು ಅನುಮೋದಿಸಿ ಒಂದು ನಿರ್ಣಯವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳು ಅಂಗೀಕರಿಸಿದ ಹೊರತು, ಅದು ಕಾರ್ಯಾಚರಣೆಯಲ್ಲಿರುವುದು ನಿಂತುಹೋಗತಕ್ಕದ್ದು.

(ಬಿ) ಯಾವುದೇ ಅಧಿಸೂಚನೆಯು ಈ ಉಪಪ್ರಕರಣದ ಮೂಲಕ ಅಥವಾ ಅದರಡಿಯಲ್ಲಿ ಕಾರ್ಯಾಚರಣೆಯಲ್ಲಿರುವುದು ನಿಂತು ಹೋದರೆ, ಹಾಗೆ ನಿಂತು ಹೋಗುವುದಕ್ಕೆ ಮೊದಲು ಮಾಡಿದ ಅಥವಾ ಮಾಡುವುದನ್ನು ಬಿಟ್ಟುಬಿಡಲಾದ ಯಾವುದೇ ಕಾರ್ಯಕ್ಕೆ ಪ್ರತಿಕೂಲವಾಗತಕ್ಕದ್ದಲ್ಲ.

**ವಿವರಣೆ :-** ರಾಜ್ಯ ವಿಧಾನಮಂಡಲದ ಉಭಯ ಸದನಗಳನ್ನು ಬೇರೆ ಬೇರೆ ದಿನಾಂಕಗಳಂದು ಮತ್ತೆ ಸಭೆ ಸೇರುವಂತೆ ಕರೆಯಲಾಗಿದ್ದರೆ, ಆ ಅರವತ್ತು ದಿನಗಳ ಅವಧಿಯನ್ನು, ಈ ದಿನಾಂಕಗಳ ನಂತರದ ದಿನಾಂಕದಿಂದ ಲೆಕ್ಕ ಹಾಕತಕ್ಕದ್ದು.

**3. ಕೆಲವು ಅತ್ಯಾವಶ್ಯಕ ಸೇವೆಗಳಲ್ಲಿ ಮುಷ್ಕರವನ್ನು ನಿಷೇಧಿಸಲು ಅಧಿಕಾರ.-** (1) ಸಾರ್ವಜನಿಕ ಹಿತಾಸಕ್ತಿಯ ಅಥವಾ ಸಾರ್ವಜನಿಕ ಸುವ್ಯವಸ್ಥೆಯ ದೃಷ್ಟಿಯಿಂದ, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಅತ್ಯಾವಶ್ಯಕ ಸೇವೆಗಳಲ್ಲಿ, ಮುಷ್ಕರವನ್ನು ನಿಷೇಧಿಸುವುದು ಅವಶ್ಯವೆಂದು ಅಥವಾ ಯುಕ್ತವೆಂದು ಸರ್ಕಾರಕ್ಕೆ ಮನದಟ್ಟಾದರೆ, ಅದು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಮತ್ತು ಆದೇಶದಲ್ಲಿ ನಿರ್ದಿಷ್ಟ ಪಡಿಸಬಹುದಾದ ಅಂಥ ದಿನಾಂಕದಿಂದ ಮುಷ್ಕರವನ್ನು ನಿಷೇಧಿಸಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶವನ್ನು, ಆದೇಶದಿಂದ ಬಾಧಿತ ವ್ಯಕ್ತಿಗಳ ಗಮನಕ್ಕೆ ತರಲು ಸರ್ಕಾರವು, ತಾನು ಅತಿ ಸೂಕ್ತವೆಂದು ಪರಿಗಣಿಸುವ ರೀತಿಯಲ್ಲಿ ಪ್ರಕಟಿಸತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಆದೇಶವು ಅದು ಕಾರ್ಯಾಚರಣೆಯಲ್ಲಿ ಬರುವ ದಿನಾಂಕದಿಂದ ಒಂದು ವರ್ಷದವರೆಗೆ ಮಾತ್ರ ಜಾರಿಯಲ್ಲಿರತಕ್ಕದ್ದು, ಆದರೆ ಸರ್ಕಾರವು, ಸಾರ್ವಜನಿಕ ಹಿತಾಸಕ್ತಿಯ ಅಥವಾ ಸಾರ್ವಜನಿಕ ಸುವ್ಯವಸ್ಥೆಯ ದೃಷ್ಟಿಯಿಂದ ಆರು ತಿಂಗಳಿಗೆ ಮೀರದ ಯಾವುದೇ ಅವಧಿಗೆ ಅದನ್ನು ವಿಸ್ತರಿಸುವುದು ಅವಶ್ಯವೆಂದು ಅಥವಾ ಯುಕ್ತವೆಂದು ಭಾವಿಸಿದರೆ ಅದೇ ಬಗೆಯ ಆದೇಶದ ಮೂಲಕ ಅದೇ ರೀತಿಯಲ್ಲಿ ಪ್ರಕಟಿಸಿ, ಹಾಗೆ ಮಾಡಬಹುದು.

(4) (1)ನೇ ಉಪಪ್ರಕರಣದಡಿಯಲ್ಲಿ ಒಂದು ಆದೇಶವನ್ನು ಹೊರಡಿಸಿದ ನಂತರ,–

(ಎ) ಆದೇಶವು ಸಂಬಂಧಪಡುವ ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ ನಿಯೋಜಿತನಾದ ಯಾವೊಬ್ಬ ವ್ಯಕ್ತಿಯು ಮುಷ್ಕರಕ್ಕೆ ಹೋಗತಕ್ಕದ್ದಲ್ಲ ಅಥವಾ ಮುಷ್ಕರದಲ್ಲಿ ಇರತಕ್ಕದ್ದಲ್ಲ; ಅಥವಾ

(ಬಿ) ಯಾವುದೇ ಅಂಥ ಸೇವೆಯಲ್ಲಿ ನಿಯೋಜಿತನಾಗಿರುವ ಯಾವೊಬ್ಬ ವ್ಯಕ್ತಿಯು, ಆದೇಶವನ್ನು ಹೊರಡಿಸುವುದಕ್ಕೆ ಮೊದಲು ಅಥವಾ ತರುವಾಯ, ಘೋಷಿಸಲ್ಪಟ್ಟ ಅಥವಾ ಪ್ರಾರಂಭವಾದ ಅಥವಾ ಮುಂದುವರೆದ ಯಾವುದೇ ಮುಷ್ಕರವು ಕಾನೂನು ಬಾಹಿರವಾಗಿರತಕ್ಕದ್ದು.

(5) (1)ನೇ ಉಪಪ್ರಕರಣ ಅಥವಾ (3) ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಯಾವುದೇ ಆದೇಶವನ್ನು, ಯಾವುದೇ ಸಮಯದಲ್ಲಿ, ಸರ್ಕಾರವು ಅದೇ ಬಗೆಯ ಆದೇಶದ ಮೂಲಕ ಹಿಂತೆಗೆದುಕೊಳ್ಳಬಹುದು. ಆದರೆ, ಹಾಗೆ ಹಿಂತೆಗೆದುಕೊಂಡದ್ದರಿಂದ, ಅಂಥ ಆದೇಶದ ಹಿಂದಿನ ಕಾರ್ಯಾಚರಣೆಗೆ ಅಥವಾ ಅದರಡಿಯಲ್ಲಿ ಕ್ರಮಬದ್ಧವಾಗಿ ಮಾಡಲಾದ ಅಥವಾ ಮಾಡಲು ಎಡೆಗೊಟ್ಟ ಯಾವುದೇ ಕಾರ್ಯಕ್ಕೆ ಮತ್ತು ಪ್ರಾಪ್ತವಾದ ಅಥವಾ ಗುರಿಯಾದ ಯಾವುದೇ, ಬಾಧ್ಯತೆ ಅಥವಾ ಹೊಣೆಗಾರಿಕೆಗೆ ಪರಿಣಾಮ ಬೀರತಕ್ಕದ್ದಲ್ಲ ಅಥವಾ ಹಾಗೆ ಹಿಂತೆಗೆದುಕೊಂಡುದುದಕ್ಕೆ ಮೊದಲು ಈ ಅಧಿನಿಯಮಕ್ಕೆ ವಿರುದ್ಧವಾಗಿ ಮಾಡಲಾಗಿದ್ದ ಯಾವುದೇ ಅಪರಾಧಕ್ಕೆ ಸಂಬಂಧಪಟ್ಟಂತೆ ಗುರಿಯಾದ ಯಾವುದೇ ದಂಡ ಅಥವಾ ಶಿಕ್ಷೆಗೆ ಬಾಧಕವಾಗತಕ್ಕದ್ದಲ್ಲ.

4. **ಕಾನೂನುಬಾಹಿರ ಮುಷ್ಕರಕ್ಕೆ ದಂಡ.–** ಯಾವೊಬ್ಬ ವ್ಯಕ್ತಿಯು, ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಕಾನೂನು ಬಾಹಿರವಾದ ಅಂಥ ಯಾವುದೇ ಮುಷ್ಕರವನ್ನು ಪ್ರಾರಂಭಿಸಿದ್ದರೆ ಅಥವಾ ಮುಷ್ಕರದಲ್ಲಿ ಮುಂದುವರೆಯುತ್ತಿದ್ದರೆ ಅಥವಾ ಅನ್ಯಥಾ ಭಾಗವಹಿಸುತ್ತಿದ್ದರೆ, ಆತನು, ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷದ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

5. **ಪ್ರಚೋದನೆ ಇತ್ಯಾದಿಗೆ ದಂಡ.–** ಯಾವೊಬ್ಬ ವ್ಯಕ್ತಿಯು, ಯಾವುದೇ ಅತ್ಯಾವಶ್ಯಕ ಸೇವೆಯಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಕಾನೂನುಬಾಹಿರವಾದ ಅಂಥ ಮುಷ್ಕರಕ್ಕೆ, ಯಾವೊಬ್ಬ ಇತರ ವ್ಯಕ್ತಿಯನ್ನು, ಪ್ರಚೋದಿಸಿದರೆ ಅಥವಾ ಪ್ರೇರೇಪಿಸಿದರೆ ಅಥವಾ ಇತರ ರೀತಿಯಿಂದ ಮುಂದುವರಿಸುವುದಕ್ಕೆ ಪ್ರೋತ್ಸಾಹಕರವಾಗಿ ವರ್ತಿಸಿದರೆ, ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷದ ಅವಧಿಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

6. **ಕಾನೂನುಬಾಹಿರ ಮುಷ್ಕರಕ್ಕೆ ಹಣಕಾಸು ನೆರವು ನೀಡಿದ್ದಕ್ಕಾಗಿ ದಂಡ.–** ಯಾವುದೇ ಅತ್ಯಾವಶ್ಯಕ ಸೇವೆಗಳಲ್ಲಿ, ಈ ಅಧಿನಿಯಮದ ಅಡಿಯಲ್ಲಿ ಕಾನೂನುಬಾಹಿರವಾಗಿರುವ ಅಂಥ ಮುಷ್ಕರಕ್ಕೆ ಪ್ರೋತ್ಸಾಹಕರವಾಗಿ ಅಥವಾ ಅದಕ್ಕೆ ಬೆಂಬಲ ನೀಡಲು ಯಾವೊಬ್ಬ ವ್ಯಕ್ತಿಯು, ತಿಳಿದೂ ತಿಳಿದೂ ಯಾವುದೇ ಹಣ ವೆಚ್ಚ ಮಾಡಿದಲ್ಲಿ ಅಥವಾ ಸರಬರಾಜು ಮಾಡಿದಲ್ಲಿ ಆತನು, ಅಪರಾಧ ನಿರ್ಣಯವಾದ ಮೇಲೆ, ಒಂದು ವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸ ಶಿಕ್ಷೆ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

7. **ಇತರ ಶಿಸ್ತು ಕ್ರಮಗಳ ಜೊತೆಗೆ 4, 5 ಅಥವಾ 6ನೇ ಪ್ರಕರಣಗಳ ಅಡಿಯಲ್ಲಿ ಕ್ರಮ ಕೈಗೊಳ್ಳುವುದು.–** 4, 5 ಅಥವಾ 6ನೇ ಪ್ರಕರಣಗಳ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯ ವಿರುದ್ಧ ಕೈಗೊಳ್ಳಲಾದ ಯಾವುದೇ ಕ್ರಮವು, ಆತನ ಸೇವಾ ಅಥವಾ ಉದ್ಯೋಗದ ನಿಬಂಧನೆಗಳು ಮತ್ತು ಷರತ್ತುಗಳ ಮೂಲಕ ಅಥವಾ ಅದರ ಅಡಿಯಲ್ಲಿನ ಮತ್ತು ಆತನು ಯಾವುದಕ್ಕೆ ಬದ್ಧನಾಗಬಹುದೋ ಅಂಥ ಶಿಸ್ತು ಸ್ವರೂಪದ ಯಾವುದೇ ಇತರ ಕ್ರಮವನ್ನು ಅಥವಾ ಮುಂದೆ ಉಂಟಾಗಬಹುದಾದ ಯಾವುದೇ ಪರಿಣಾಮವನ್ನು ಬಾಧಿಸತಕ್ಕದ್ದಲ್ಲ ಮತ್ತು ಅದು ಅದಕ್ಕೆ ಹೆಚ್ಚುವರಿಯಾಗತಕ್ಕದ್ದು.

8. **ವಾರಂಟಿಲ್ಲದೆ ದಸ್ತಗಿರಿ ಮಾಡಲು ಅಧಿಕಾರ.–** (1) ದಂಡ ಪ್ರಕ್ರಿಯಾ ಸಂಹಿತೆ, 1973 ರಲ್ಲಿ (1974ರ ಕೇಂದ್ರ ಅಧಿನಿಯಮ ಸಂಖ್ಯೆ 2) ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯು ಯಾವುದೇ ಅಪರಾಧ ಮಾಡಿರುವನೆಂದು ಯಾವೊಬ್ಬ ಪೊಲೀಸ್ ಅಧಿಕಾರಿಯು ಸಕಾರಣವಾಗಿ ಸಂಶಯಪಟ್ಟಲ್ಲಿ, ಆತನನ್ನು ವಾರಂಟಿಲ್ಲದೆ ದಸ್ತಗಿರಿ ಮಾಡಬಹುದು.

(2) ಈ ಅಧಿನಿಯಮದಲ್ಲಿನ ಎಲ್ಲಾ ಅಪರಾಧಗಳು ಜಾಮೀನೀಯವಾಗಿಲ್ಲದಿರತಕ್ಕದ್ದು.

9. **ಅಧಿನಿಯಮವು ಅಧ್ಯಾರೋಹಿ ಪರಿಣಾಮ ಹೊಂದುವುದು.–** ಈ ಅಧಿನಿಯಮದ ಉಪಬಂಧಗಳ ಮತ್ತು ಅದರಡಿಯಲ್ಲಿ ಹೊರಡಿಸಲಾದ ಯಾವುದೇ ಆದೇಶವು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅದಕ್ಕೆ ವಿರುದ್ಧವಾದುದು ಏನೇ ಒಳಗೊಂಡಿದ್ದರೂ, ಪರಿಣಾಮಕಾರಿಯಾಗಿರತಕ್ಕದ್ದು:

ಪರಂತು, ಈ ಅಧಿನಿಯಮದಲ್ಲಿ ಒಳಗೊಂಡ ಉಪಬಂಧಗಳು, ವಿದ್ಯುಚ್ಛಕ್ತಿ ಅಧಿನಿಯಮ, 2003ರ ಯಾವುವೇ ಉಪಬಂಧಗಳು ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮ ಅಥವಾ ಆದೇಶಗಳಿಗೆ ಅಧ್ಯಾರೋಹಿಯಾಗಿರತಕ್ಕದ್ದಲ್ಲ.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಜಲ ಅಥವಾ ವಿದ್ಯುಚ್ಛಕ್ತಿಗೆ ಸಂಬಂಧಪಟ್ಟಂತೆ ಉತ್ಪಾದನೆ, ತಯಾರಿಕೆ, ಶೇಖರಣೆ, ಸಾಗಣೆ, ಪೂರೈಕೆ ಅಥವಾ ವಿತರಣೆಗೆ ಸಂಬಂಧಿಸಿದಂತೆ, ಮೋಟಾರು ವಾಹನಗಳಲ್ಲಿ ಪ್ರಯಾಣಿಕರನ್ನು ಅಥವಾ ಸರಕುಗಳನ್ನು ಸಾಗಿಸುವುದಕ್ಕಾಗಿ ಇರುವ ಸಾರಿಗೆ ಸೇವೆಗೆ ಸಂಬಂಧಿಸಿದಂತೆ ಮತ್ತು ರಾಜ್ಯ ವಿಧಾನ ಮಂಡಲವು ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿರುವಂಥ ಯಾವುದೇ ಇತರ ಸೇವೆ ಅಥವಾ ಉದ್ಯೋಗ ಅಥವಾ ಅದರ ವರ್ಗಕ್ಕೆ ಸಂಬಂಧಿಸಿದಂತೆ ಕೆಲವು ಅತ್ಯಾವಶ್ಯಕ ಸೇವೆಗಳಲ್ಲಿ ಕೆಲಸ ಮಾಡುವುದನ್ನು ನಿರಾಕರಿಸುವುದನ್ನು ನಿಷೇಧಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಅದಕ್ಕಾನುಸಾರವಾಗಿ, ರಾಜ್ಯ ವಿಧಾನಮಂಡಲದ ಉಭಯ ಸದನಗಳಿಂದ ಅಂಗೀಕಾರವಾದಂತೆ ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ವಿಧೇಯಕ, 2009 ಅನ್ನು ಘನತೆವೆತ್ತ ರಾಷ್ಟ್ರಾಧ್ಯಕ್ಷರ ಒಪ್ಪಿಗೆಯನ್ನು ಪಡೆಯಲು ಭಾರತ ಸರ್ಕಾರಕ್ಕೆ ಕಳುಹಿಸಲಾಯಿತು.

ಸದರಿ ವಿಧೇಯಕದ ಸಂಬಂಧದಲ್ಲಿ ವಿದ್ಯುಚ್ಛಕ್ತಿ ಮಂತ್ರಾಲಯ ಹಾಗೂ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯದ ಪರಿವೀಕ್ಷಣಾ ಟಿಪ್ಪಣಿಗಳನ್ನು ದಿನಾಂಕ: 17.05.2010ರ ಪತ್ರ ಸಂಖ್ಯೆ: 17/24/2009–ಜುಡಿಷಿಯಲ್ & ಪಿಪಿ ಯಲ್ಲಿ ಭಾರತ ಸರ್ಕಾರವು ತಿಳಿಯಪಡಿಸಿತ್ತು. ದಿನಾಂಕ: 20.10.2011ರ ಪತ್ರ ಸಂಖ್ಯೆ: ಸಂವ್ಯಶಾಇ 3 ಶಾಸನ 2009 ರಲ್ಲಿ ಅಗತ್ಯವಾದ ಸ್ಪಷ್ಟೀಕರಣಗಳನ್ನು ಭಾರತ ಸರ್ಕಾರಕ್ಕೆ ಒದಗಿಸಲಾಗಿತ್ತು.

ಭಾರತ ಸರ್ಕಾರವು ತನ್ನ ಪತ್ರ ಸಂಖ್ಯೆ: 17/24/2009–ಜುಡಿಷಿಯಲ್ & ಪಿಪಿ ದಿನಾಂಕ: 24.10.2011 ರಲ್ಲಿ ಹಾಲಿ ವಿಧೇಯಕವನ್ನು (2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 9) ಹಿಂತೆಗೆದುಕೊಂಡು, ಅವಶ್ಯವಾದ ಮಾರ್ಪಾಡುಗಳನ್ನು ಕೈಗೊಂಡ ತರುವಾಯ ಮತ್ತೊಂದು ವಿಧೇಯಕವನ್ನು ಸಲ್ಲಿಸುವಂತೆ ರಾಜ್ಯ ಸರ್ಕಾರವನ್ನು ಕೋರಿತ್ತು.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರಕ್ಕೆ ಸಂಬಂಧಿಸಿದ ಜ್ಞಾಪನ ಪತ್ರ**

**ಖಂಡ 2:** 2ನೇ ಖಂಡದ (1)ನೇ ಉಪಖಂಡದ (ಎ) ಬಾಬಿನ (iii)ನೇ ಉಪಬಾಬು, ಈ ಅಧಿನಿಯಮದ ಉದ್ದೇಶಕ್ಕಾಗಿ ಅತ್ಯಾವಶ್ಯಕ ಸೇವೆಗಳು ಯಾವುವು ಎಂಬುದನ್ನು ಅಧಿಸೂಚನೆಯ ಮೂಲಕ ಘೋಷಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ 3:** 3ನೇ ಖಂಡದ (1)ನೇ ಉಪಖಂಡವು, ಅತ್ಯಾವಶ್ಯಕ ಸೇವೆಗಳನ್ನು ನಿರ್ದಿಷ್ಟಪಡಿಸಲು ಮತ್ತು ಯಾವ ದಿನಾಂಕದಿಂದ ಮುಷ್ಕರವನ್ನು ನಿಷೇಧಿಸಲಾಗಿದೆ ಎಂಬುದನ್ನು ಆದೇಶದಲ್ಲಿ ನಿರ್ದಿಷ್ಟಪಡಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

ಪ್ರತ್ಯಾಯೋಜಿತ ಶಾಸನ ರಚನಾಧಿಕಾರವು ವಾಡಿಕೆಯ ಸ್ವರೂಪದ್ದಾಗಿದೆ.

**ರಾಮಲಿಂಗಾ ರೆಡ್ಡಿ**
ಸಾರಿಗೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

***KARNATAKA LEGISLATIVE ASSEMBLY***
***FOURTEENTH LEGISLATIVE ASSEMBLY***
***SECOND SESSION***

## *THE KARNATAKA ESSENTIAL SERVICES MAINTENANCE BILL, 2013*
## *(L.A. Bill No. 12 of 2013)*

A Bill to provide for the maintenance of certain essential services.

Whereas it is expedient to provide for the maintenance of certain essential services and for matters connected therewith for the purposes hereinafter appearing;

Be it enacted by the Karnataka State Legislature in the sixty-fourth year of the Republic of India, as follows :-

***1. Short title, extent and commencement .-*** (1) This Act may be called the Karnataka Essential Services Maintenance Act, 2013.

(2) It extends to the whole of the State of Karnataka.

(3) It shall come into force at once, and remain in force for a period of ten years.

***2. Definitions .-*** (1) In this Act, unless the context otherwise requires,-

(a) "essential service" means,-

(i) any service connected with production, generation, storage, transmission, supply or distribution, as the case may be, of water or electricity;

(ii) any transport service for the carriage of passengers or goods by motor vehicles.

***Explanation .-*** For the purpose of this clause, the expression "motor vehicle" shall have the meaning assigned to it in clause (28) of section 2 of the Motor Vehicles Act, 1988 (Central Act 59 of 1988).

(iii) any other service or employment or class thereof connected with any matter with respect to which the State Legislature has power to make laws under List II of the Seventh Schedule to the Constitution and which the Government being of the opinion that refusal to work therein would prejudicially affect the maintenance of any public utility services or the public safety or the maintenance of supplies and service necessary for the life of the community or would result in the infliction of grave hardship on the community, may, by notification, declare to be an essential service for the purpose of this Act;

(b) "Government" means, the State Government;

(c) "strike" means the cessation of work by a body of persons while employed in any essential service, acting in combination or a concerted refusal or a refusal under a common understanding of any number of persons who are or have been so employed to continue to work or to accept work assigned and includes,-

(i) refusal to work overtime where such work is necessary for the maintenance of any essential service; and

(ii) Any other conduct which is likely to result in or results in, cessation or substantial retardation of work in any essential service.

(2) (a) Every notification issued under sub-clause (iii) of clause (a) of sub-section (1) shall be laid before each House of the State Legislature within a week after it is made, if the House is in session, and within a week after the commencement of the next session of the House, if it is not in session and shall cease to operate at the expiration of sixty days from the date of its being so laid or from the re-assembly of the State Legislature as the case may be, unless before the expiration of that period a resolution approving the issue of the notification is passed by both Houses of the State Legislature;

(b) Where any notification ceases to operate by or under this sub-section, the ceaser shall be without prejudice to anything done or omitted to be done before such ceaser.

***Explanation .-*** Where the two Houses of the State Legislature are summoned to re-assemble on different dates the period of sixty days shall be reckoned from the latter of these dates.

***3. Power to prohibit strike in certain essential services.-*** (1) If the Government are satisfied that in public interest or in the interest of the public order, it is necessary or expedient so to do, they may, by general or special order, prohibit strike in such essential services and from such date as may be specified in the order.

(2) An order made under sub-section (1) shall be published in such manner as the Government consider best calculated to bring it to the notice of the persons affected by the order.

(3) An order made under sub-section (1) shall be in force for one year only from the date it comes into operation, but the Government may, by a like order, published in the like manner, extend it for any period not exceeding six months, if they are satisfied that in the public interest or in the interest of the public order it is necessary or expedient so to do.

(4) Upon the issue of an order under sub-section (1) ,-

(a) no person employed in any essential service to which the order relates shall go or remain on strike; or

(b) any strike declared or begun or continued, whether before or after the issue of the order, by any person employed in any such service, shall be illegal.

(5) Any order made under sub-section (1) or sub-section (3) may, at any time, be rescinded by the Government by a like order, but such rescission shall not affect the previous operation of such order or anything duly done or suffered thereunder, and shall not affect any obligation or liability accrued or incurred or any penalty or punishment incurred in respect of any offence committed against this Act before such rescission.

***4. Penalty for illegal strike.-*** Any person who commences a strike or continues to go on strike or otherwise takes part in any such strike which is illegal under this Act in any essential service, shall on conviction, be punished with imprisonment for a term which may extend to one year or with fine which may extend to five thousand rupees or with both.

***5. Penalty for instigation, etc. .-*** Any person who instigates, or incites any other person to take part in, or otherwise acts in furtherance of strike which is illegal under this Act in any essential service, shall on conviction, be

punished with imprisonment for a term which may extend to one year or with fine which may extend to five thousand rupees or with both.

***6. Penalty for giving financial aid to illegal strike.-*** Any person who knowingly expends or supplies any money in furtherance or support of strike which is illegal under this Act in any essential service shall on conviction, be punished with imprisonment for a term which may extend to one year or with fine which may extend to five thousand rupees, or with both.

***7. Action under sections 4, 5 or 6 in addition to other disciplinary action.-*** Any action taken against any person under sections 4, 5 or 6 shall not affect and shall, be in addition to, any other action of a disciplinary nature or any consequence which may ensue, and to which the person may be liable by or under the terms and conditions of his service or employment.

***8. Power to arrest without warrant.-***(1)Notwithstanding anything contained in the Code of Criminal Procedure, 1973 (Central Act 2 of 1974), any police officer may arrest without warrant any person who is reasonably suspected of having committed any offence under this Act.

(2) All offences in this Act shall be non-bailable.

***9. Act to override other laws.-*** The provisions of this Act and any order issued thereunder shall have effect notwithstanding anything inconsistent therewith contained in any other law for the time being in force:

Provided that the provisions contained in this Act shall not override any of the provisions of the Electricity Act, 2003 or rule or orders made thereunder.

### *STATEMENT OF OBJECTS AND REASONS*

It is considered necessary to prohibit refusal to work in certain essential services connected with production, generation, storage, transmission, supply or distribution of water or electricity, transport service for the carriage of passengers or goods by motor vehicles and any other service or employment or class thereof with respect to which the State Legislature has power to make laws.

Accordingly, the Karnataka Essential Services Maintenance Bill, 2009 as passed by both the houses of the State Legislature was sent to Government of India to obtain the assent of His Excellency the President.

The Government of India vide its letter No.17/24/2009-Judl & PP, dated: 17.05.2010 had communicated the observation notes of the Ministry of Power and the Ministry of Labour and Employment in respect of the said Bill. The required clarifications were furnished to the Government of India vide letter No.DPAL.3.Shasana.2009, dated.20.10.2011.

The Government of India vide its letter No.17/24/2009-Judl & PP, dated: 24.10.2011 had requested the State Government to consider withdrawing the present Bill (LA Bill No.9 of 2009) and after carrying out necessary modifications to submit another Bill.

Hence the Bill.

### *FINANCIAL MEMORANDUM*

There is no extra expenditure involved in the proposed legislative measure.

### *MEMORANDUM REGARDING DELEGATED LEGISLATION*

***Clause 2.***- Sub-item (iii) of item (a) of sub-clause (1) of clause 2 empowers the State Government to declare by notification such of the services to be the essential services for the purposes of this Act.

***Clause 3***.- Sub-clause (1) of Clause 3 empowers the State Government to specify the essential service and to specify the date from which strike therein, is prohibited in the order.

The proposed delegation of Legislative power is of a normal character.

***RAMALINGA REDDY***
Minister for Transport

***P. OMPRAKASHA***
Secretary
Karnataka Legislative Assembly

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– *IV-A* | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫) | ನಂ.೧೨೯೨ |
| ***Part– IV-A*** | ***Bangalore, Thursday, November 28, 2013 (Margashira 7, Shaka Varsha 1935)*** | ***No. 1292*** |

## *KARNATAKA LEGISLATIVE ASSEMBLY SECRETARIAT*

### *NOTIFICATION*

***No. KLA/LGA/14/LA Bill/2013, Bangalore, Dated: 28-11-2013***

The following Bill was introduced in Legislative Assembly on 28-11-2013

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಎರಡನೇ ಅಧಿವೇಶನ**

## ಕರ್ನಾಟಕ ರಾಜ್ಯ ಮಹಿಳಾ ಆಯೋಗ (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 14)**

ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ನ್ನು (1995ರ ಕರ್ನಾಟಕ ಅಧಿನಿಯಮ 17) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ (1995ರ ಕರ್ನಾಟಕ ಅಧಿನಿಯಮ 17) 3ನೇ ಪ್ರಕರಣದ (2)ನೇ ಉಪಪ್ರಕರಣದ (ಬಿ) ಖಂಡದ ಮೊದಲನೇ ಪರಂತುಕದಲ್ಲಿ "ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು" ಎಂಬ ಪದಗಳಿಗೆ "ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ, ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು" ಮತ್ತು ಎಂಬ ಪದಗಳು ಮತ್ತು ಅಲ್ಪವಿರಾಮ ಚಿಹ್ನೆಯನ್ನು ಪ್ರತಿಯೋಜಿಸತಕ್ಕದ್ದು.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಹಿಂದುಳಿದ ವರ್ಗಗಳ ಪ್ರಾತಿನಿಧ್ಯಕ್ಕಾಗಿ ಉಪಬಂಧ ಕಲ್ಪಿಸಲು ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ (1995ರ ಕರ್ನಾಟಕ ಅಧಿನಿಯಮ 17) 3ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

### ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಉಮಾಶ್ರೀ**
ಮಹಿಳಾ ಮತ್ತು ಮಕ್ಕಳ ಕಲ್ಯಾಣ,
ಕನ್ನಡ ಮತ್ತು ಸಂಸ್ಕೃತಿ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ (1995ರ ಕರ್ನಾಟಕ ಅಧಿನಿಯಮ 17) ಉದ್ಧೃತ ಭಾಗ**

Xx xx xx

**3. ಆಯೋಗದ ರಚನೆ.-** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಸರ್ಕಾರವು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮತ್ತು ವಹಿಸಲಾದ ಪ್ರಕಾರ್ಯಗಳನ್ನು ನೆರವೇರಿಸಲು, ಬೆಂಗಳೂರಿನಲ್ಲಿ ಕೇಂದ್ರಸ್ಥಾನವನ್ನು ಹೊಂದಿರುವ ಕರ್ನಾಟಕ ರಾಜ್ಯ ಮಹಿಳಾ ಆಯೋಗ ಎಂದು ಕರೆಯಲಾಗುವ ಒಂದು ನಿಕಾಯವನ್ನು ರಚಿಸತಕ್ಕದ್ದು.

(2) ಆಯೋಗವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು ಎಂದರೆ:-

(ಎ) ಮಹಿಳಾ ಹಿತರಕ್ಷಣೆಗಾಗಿ ತಮ್ಮನ್ನು ಮುಡುಪಿಟ್ಟುಕೊಂಡಿರುವ ಸರ್ಕಾರದಿಂದ ನಾಮ ನಿರ್ದೇಶಿತರಾಗತಕ್ಕ ಒಬ್ಬ ಮಹಿಳಾ ಅಧ್ಯಕ್ಷರು;

(ಬಿ) ಕಾನೂನು ಅಥವಾ ಶಾಸನ ರಚನೆ, ಕಾರ್ಮಿಕ ಸಂಘವಾದ, ಮಹಿಳೆಯರ ಉದ್ಯೋಗ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಇರುವಂಥ ಕೈಗಾರಿಕೆ ಅಥವಾ ಸಂಸ್ಥೆಯ ನಿರ್ವಹಣೆ, (ಮಹಿಳಾ ಕಾರ್ಯಕರ್ತರೂ ಸೇರಿದಂತೆ) ಮಹಿಳಾ ಸ್ವಯಂ ಸೇವಾ ಸಂಸ್ಥೆಗಳ ಆಡಳಿತ, ಆರ್ಥಿಕ ಅಭಿವೃದ್ಧಿ, ಆರೋಗ್ಯ, ಶಿಕ್ಷಣ ಅಥವಾ ಸಮಾಜ ಕಲ್ಯಾಣದಲ್ಲಿ ಅನುಭವವುಳ್ಳ ಸಮರ್ಥ, ಪ್ರಾಮಾಣಿಕ ಮತ್ತು ಗಣ್ಯ ವ್ಯಕ್ತಿಗಳ ಪೈಕಿ ಸರ್ಕಾರವು ನಾಮನಿರ್ದೇಶಿಸತಕ್ಕ ಆರು ಜನ ಸದಸ್ಯರು:

ಪರಂತು, ಕಡೇಪಕ್ಷ ಕ್ರಮವಾಗಿ ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು:

ಮತ್ತು ಪರಂತು, ಈ ಖಂಡದಡಿ ನಾಮನಿರ್ದೇಶಿತರಾಗತಕ್ಕ ಬಹುತೇಕ ಸದಸ್ಯರು ಮಹಿಳೆಯರಾಗಿರತಕ್ಕದ್ದು;

(ಸಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ, ಪದನಿಮಿತ್ತ ಸದಸ್ಯ;

(ಡಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು, ಪದನಿಮಿತ್ತ ಸದಸ್ಯ;

(ಇ) ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಅಥವಾ ಅವರು ನಾಮನಿರ್ದೇಶಿಸಿದ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ದರ್ಜೆಗೆ ಕಡಿಮೆಯಲ್ಲದ ಹುದ್ದೆಯ ಅಧಿಕಾರಿ, ಮಹಿಳೆಗೆ ಇದರಲ್ಲಿ ಆದ್ಯತೆ ನೀಡುವುದು, ಪದನಿಮಿತ್ತ ಸದಸ್ಯ;

(ಎಫ್) ಆಯೋಗದ ಕಾರ್ಯದರ್ಶಿಯು ಸದಸ್ಯ-ಕಾರ್ಯದರ್ಶಿಯಾಗಿರತಕ್ಕದ್ದು.

Xx xx xx

***KARNATAKA LEGISLATIVE ASSEMBLY***

***FOURTEENTH LEGISLATIVE ASSEMBLY***

***SECOND SESSION***

## *THE KARNATAKA STATE COMMISSION FOR WOMEN (AMENDMENT) BILL, 2013*

***(L.A. Bill No. 14 of 2013)***

A Bill further to amend the Karnataka State Commission for Women Act, 1995.

Whereas, it is expedient further to amend the Karnataka State Commission for Women Act, 1995 (Karnataka Act 17 of 1995) for the purposes hereinafter appearing;

Be it enacted by The Karnataka State Legislature in the sixty-fourth year of the Republic of India, as follows:-

***1. Short title and commencement.***- (1) This Act may be called The Karnataka State Commission for Women (Amendment) Act, 2013.

(2) It shall come into force at once.

***2. Amendment of section 3.***- In the Karnataka State Commission for Women Act, 1995 (Karnataka Act 17 of 1995), in section 3, in sub-section (2), in clause(b), in the first proviso, for the words "Scheduled Castes and Scheduled Tribes", the words "Scheduled Castes, Scheduled Tribes and Backward Classes" shall be substituted.

***STATEMENT OF OBJECTS AND REASONS***

It is considered necessary to amend the section 3 of the Karnataka State Commission for Women Act, 1995 (Karnataka Act 17 of 1995) to provide for representation of Backward Classes.

Hence, the Bill.

***FINANCIAL MEMORANDUM***

There is no extra expenditure involved in the proposed Legislative measure.

***UMASHRI***
Minister for Women and Child Welfare,
Kannada and Culture

***P. OMPRAKASHA***
Secretary
Karnataka Legislative Assembly

***ANNEXURE***

***EXTRACT FROM THE KARNATAKA STATE COMMISSION FOR WOMEN ACT, 1995 (KARNATAKA ACT 17 OF 1995)***

***xx*** ***xx*** ***xx***

***3. Constitution of the Commission.***- (1) As soon as may be after the commencement of this Act, the Government shall constitute a body to be called as the Karnataka State Commission for Women to exercise the powers conferred on and to perform the functions assigned to it by or under this Act with its headquarters at Bangalore.

(2) The Commission shall consist of the following members, namely:-

(a) a Chairperson who shall be a woman committed to the cause of women to be nominated by the Government;

(b) six members to be nominated by the Government from amongst persons of ability, integrity and standing who have had experience in law or legislation, trade unionism, management of an industry or organisation committed to increasing the employment potential of women, women's voluntary organisations including women activists administration, economic development, health, education or social welfare:

Provided that at least one member each shall be from amongst persons belonging to Scheduled Castes and Scheduled Tribes respectively:

Provided further that majority of the members nominated under this clause shall be women;

(c) The Secretary to Government incharge of Women and Child Development - ex-officio member;

(d) Director of Women and Child Development- ex-officio member;

(e) Director General of Police or his nominee not below the rank of Deputy Inspector General of Police, preferably a women - ex- officio member;

(f) Secretary of the Commission, who shall be the member - Secretary.

***xx*** ***xx*** ***xx***


# ವಿಶೇಷ ರಾಜ್ಯ ಪತ್ರಿಕೆ

| ಭಾಗ– ***IV-A*** | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫) | ನಂ.೧೨೯೩ |
|---|---|---|
| ***Part– IV-A*** | ***Bangalore, Thursday, November 28, 2013 (Margashira 7, Shaka Varsha 1935)*** | ***No. 1293*** |


## ***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/15/LA Bill/2013, Bangalore, Dated: 28-11-2013***

The following Bill was introduced in Legislative Assembly on 28-11-2013

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಎರಡನೇ ಅಧಿವೇಶನ**

## ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 15)**

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1994ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1994ನ್ನು (1994ರ ಕರ್ನಾಟಕ ಅಧಿನಿಯಮ 44) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 12ನೇ ಪ್ರಕರಣದ ತಿದ್ದುಪಡಿ.-** ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1994ರಲ್ಲಿ (1994ರ ಕರ್ನಾಟಕ ಅಧಿನಿಯಮ 44) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 12ನೇ ಪ್ರಕರಣದಲ್ಲಿ,-

(i) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(3) (2)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಸಮಿತಿಯು, ಕುಲಪತಿಯು ನಾಮನಿರ್ದೇಶಿಸಿದ ಒಬ್ಬರು, ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಒಬ್ಬರು ಮತ್ತು ಸಿಂಡಿಕೇಟ್ ನಾಮನಿರ್ದೇಶಿಸಿದ ಒಬ್ಬರು-ಹೀಗೆ ಈ ಮೂವರು ವ್ಯಕ್ತಿಗಳನ್ನು ಒಳಗೊಂಡ, ರಾಜ್ಯ ಸರ್ಕಾರವು ರಚಿಸಿದ ಒಂದು ಶೋಧನಾ ಸಮಿತಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ಸದಸ್ಯರಲ್ಲಿ ಒಬ್ಬನನ್ನು ಸಮಿತಿಯ ಅಧ್ಯಕ್ಷನನ್ನಾಗಿ ನೇಮಕ ಮಾಡತಕ್ಕದ್ದು. ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಯು ಅಥವಾ ಸರ್ಕಾರದ ಉಪಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತನು ಶೋಧನಾ ಸಮಿತಿಯ ಸಂಚಾಲಕನಾಗಿರತಕ್ಕದ್ದು."

(ii) (4)ನೇ ಉಪಪ್ರಕರಣದಲ್ಲಿ,-

(ಎ) "ಆದರೆ ಅವನು ಮರುನೇಮಕಾತಿ ಹೊಂದಲು ಅರ್ಹನಾಗಿರತಕ್ಕದ್ದು." ಎಂಬ ಪದಗಳಿಗೆ "ಎರಡನೇ ಅವಧಿಗೆ ಮರುನೇಮಕಕ್ಕಾಗಿ ಅವನು ಅರ್ಹನಾಗಿರತಕ್ಕದ್ದಲ್ಲ." ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) ಮೊದಲನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(ಸಿ) ಎರಡನೇ ಪರಂತುಕದಲ್ಲಿ "ಅಷ್ಟೇ ಅಲ್ಲದೆ" ಎಂಬ ಪದಗಳಿಗೆ "ಪರಂತು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**3. 15ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 15ನೇ ಪ್ರಕರಣದಲ್ಲಿ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(1) ರಿಜಿಸ್ಟ್ರಾರ್‌ನು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ಭಾರತೀಯ ಆಡಳಿತ ಸೇವೆಗೆ ಸೇರಿದ ಹಿರಿಯ ಶ್ರೇಣಿಯಲ್ಲಿನ ಒಬ್ಬ ಅಧಿಕಾರಿಯನ್ನು ಅಥವಾ ಕರ್ನಾಟಕ ಆಡಳಿತ ಸೇವೆಗೆ ಸೇರಿದ, ಸೂಪರ್‌ಟೈಮ್ ವೇತನ ಶ್ರೇಣಿಯ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು, ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿ ನೇಮಕ ಮಾಡತಕ್ಕದ್ದು."

**4. 16ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 16ನೇ ಪ್ರಕರಣದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(1) ರಿಜಿಸ್ಟ್ರಾರನು (ಮೌಲ್ಯಮಾಪನ) ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ಸಮೂಹ ಎ ದರ್ಜೆ ಹಿರಿಯ ವೇತನ ಶ್ರೇಣಿಗೆ ಕಡಿಮೆಯಿರದ ಕರ್ನಾಟಕ ಆಡಳಿತ ಸೇವೆಗೆ ಸೇರಿದ ಒಬ್ಬ ಅಧಿಕಾರಿಯನ್ನಾಗಲಿ ಅಥವಾ ಪ್ರಾಧ್ಯಾಪಕ ಹುದ್ದೆಯಲ್ಲಿ ಕನಿಷ್ಠಪಕ್ಷ ಐದು ವರ್ಷಗಳ ನಿರಂತರ ಸೇವೆ ಸಲ್ಲಿಸಿದ ಸ್ವಾಯತ್ತ ಸರ್ಕಾರಿ ವೈದ್ಯಕೀಯ ಸಂಸ್ಥೆಯ ಒಬ್ಬ ಪ್ರಾಧ್ಯಾಪಕರನ್ನಾಗಲಿ ರಿಜಿಸ್ಟ್ರಾರ್ (ಮೌಲ್ಯಮಾಪನ) ಆಗಿ ನೇಮಿಸತಕ್ಕದ್ದು."

**5. 17ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 17ನೇ ಪ್ರಕರಣದ (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(1) ಹಣಕಾಸು ಅಧಿಕಾರಿಯು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ರಾಜ್ಯ ಸರ್ಕಾರವು, ರಾಜ್ಯ ಲೆಕ್ಕಪತ್ರಗಳ ಇಲಾಖೆಯಲ್ಲಿ ಜಂಟಿ ನಿಯಂತ್ರಕರ ವೃಂದಕ್ಕೆ ಸೇರಿದ ಒಬ್ಬ ಅಧಿಕಾರಿಯನ್ನು ವಿಶ್ವವಿದ್ಯಾಲಯದ ಹಣಕಾಸು ಅಧಿಕಾರಿಯನ್ನಾಗಿ ನೇಮಿಸತಕ್ಕದ್ದು."

**6. 18ನೇ ಪ್ರಕರಣದ ಪ್ರತಿಯೋಜನೆ.-** ಮೂಲ ಅಧಿನಿಯಮದ 18ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"**18 ಇತರ ಅಧಿಕಾರಿಗಳು.-** 9ನೇ ಪ್ರಕರಣದ (viii) ನೇ ಖಂಡದಲ್ಲಿ ಉಲ್ಲೇಖಿಸಿದ ವಿಶ್ವವಿದ್ಯಾಲಯದ ಇತರ ಅಧಿಕಾರಿಗಳ ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು ಅಥವಾ ರಾಜ್ಯ ಸರ್ಕಾರದ ಅಧಿಕಾರಿಗಳನ್ನು ಅಥವಾ ಸರ್ಕಾರಿ ಸ್ವಾಯತ್ತ ವೈದ್ಯಕೀಯ ಸಂಸ್ಥೆಗಳ ಅಧಿಕಾರಿಗಳನ್ನು ಮೂರು ವರ್ಷಗಳನ್ನು ಮೀರದಂಥ ಅವಧಿಗೆ ಪ್ರತಿನಿಯೋಜಿಸತಕ್ಕದ್ದು, ಆದರೆ ಅಂಥ ಯಾರೇ ಅಧಿಕಾರಿಗಳನ್ನು ವಿಶ್ವವಿದ್ಯಾಲಯದಲ್ಲಿನ ಯಾವುದೇ ಆಡಳಿತಾತ್ಮಕ ಹುದ್ದೆಗಳಿಗೆ ಯಾವುದೇ ಅನುದಾನಿತ ಅಥವಾ ಅನುದಾನ ರಹಿತ ಖಾಸಗಿ ಕಾಲೇಜುಗಳಿಂದ ಅಥವಾ ಶಿಕ್ಷಣ ಸಂಸ್ಥೆಗಳಿಂದ ಪ್ರತಿನಿಯೋಜನೆ ಮಾಡಿಕೊಳ್ಳತಕ್ಕದ್ದಲ್ಲ. ಅಂಥ ಅಧಿಕಾರಿಗಳ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತಿರತಕ್ಕದ್ದು."

**7. 21ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 21ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,-

(i) (iii) ನೇ ಖಂಡಕ್ಕೆ ಈ ಮುಂದಿನ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(iii) ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ
ಅವನಿಂದ ನಾಮನಿರ್ದೇಶಿತನಾದ ಸರ್ಕಾರದ ಉಪ ಕಾರ್ಯದರ್ಶಿಯ
ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ವ್ಯಕ್ತಿ."

(ii) (xiii) ನೇ ಖಂಡಕ್ಕೆ ಬದಲಾಗಿ ಈ ಕೆಳಕಂಡ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(xiii) ಭಾರತ ವೈದ್ಯಕೀಯ ಪರಿಷತ್ತು, ಭಾರತ ದಂತ ವೈದ್ಯಕೀಯ ಪರಿಷತ್ತು, ಭಾರತ ಔಷಧ ಪರಿಷತ್ತು, ಇಂಡಿಯನ್ ನರ್ಸಿಂಗ್ ಕೌನ್ಸಿಲ್, ಸೆಂಟ್ರಲ್ ಕೌನ್ಸಿಲ್ ಆಫ್ ಇಂಡಿಯನ್ ಮೆಡಿಸಿನ್ ಮತ್ತು ಸೆಂಟ್ರಲ್ ಕೌನ್ಸಿಲ್ ಆಫ್ ಹೋಮಿಯೋಪತಿ– ಇವುಗಳಿಗೆ ತಲಾ ಒಬ್ಬರಂತೆ ಕರ್ನಾಟಕ ವಿಭಾಗದಿಂದ ಚುನಾಯಿತರಾಗಿರುವ ಒಟ್ಟು ಆರು ಜನ ಸದಸ್ಯರು;"

**8. 24ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 24ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ,–

(ಎ) (i)ನೇ ಖಂಡದ ತರುವಾಯ ಈ ಕೆಳಕಂಡ ಖಂಡಗಳನ್ನು ಸೇರಿಸತಕ್ಕದ್ದು, ಎಂದರೆ:–

"(i-ಎ) ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವನಿಂದ ನಾಮನಿರ್ದೇಶಿತನಾದ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ವ್ಯಕ್ತಿ;

(i-ಬಿ) ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಅವನಿಂದ ನಾಮನಿರ್ದೇಶಿತನಾದ ಸರ್ಕಾರದ ಉಪ ಕಾರ್ಯದರ್ಶಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ವ್ಯಕ್ತಿ."

(ಬಿ) (x) ನೇ ಖಂಡಕ್ಕೆ ಈ ಕೆಳಕಂಡ ಖಂಡವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(x) ಸ್ವಾಯತ್ತ ಸರ್ಕಾರಿ ವೈದ್ಯಕೀಯ ಸಂಸ್ಥೆಯಿಂದ ಸರ್ಕಾರವು ವಾರ್ಷಿಕ ಸುತ್ತು ಸರದಿಯಂತೆ ನಾಮನಿರ್ದೇಶಿಸುವ ಒಬ್ಬ ನಾಮನಿರ್ದೇಶಿತ."

(ಸಿ) (xi) ನೇ ಖಂಡದ ತರುವಾಯ ಈ ಕೆಳಕಂಡ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(xii) ಆರೋಗ್ಯ ವಿಜ್ಞಾನಗಳ ಕ್ಷೇತ್ರದಲ್ಲಿನ ಪರಿಣಿತ ವ್ಯಕ್ತಿಗಳಿಂದ ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ಆರು ವ್ಯಕ್ತಿಗಳು, ಅವರಲ್ಲಿ,–

(i) ಪರಿಶಿಷ್ಟ ಜಾತಿಗಳು ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ಒಬ್ಬ ವ್ಯಕ್ತಿ;
(ii) ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಒಬ್ಬ ವ್ಯಕ್ತಿ;
(iii) ಒಬ್ಬ ಮಹಿಳೆ;
(iv) ಭಾಷಾ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಒಬ್ಬ ವ್ಯಕ್ತಿ; ಮತ್ತು
(v) ಇಬ್ಬರು ಇತರರು,

–ಇರತಕ್ಕದ್ದು:

ಪರಂತು, ಸಂಯೋಜಿತ ಕಾಲೇಜಿನಲ್ಲಿ ಅಥವಾ ವಿಶ್ವವಿದ್ಯಾಲಯದಲ್ಲಿ ಯಾವುದೇ ಸ್ಥಾನದಲ್ಲಿ ನಿಯೋಜಿತನಾಗಿರುವ ಯಾರೇ ವ್ಯಕ್ತಿಯು ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ."

**9. 40ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 40ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**40. ನಿಧಿಗಳ ನಿರ್ವಹಣೆ.**– ವಿಶ್ವವಿದ್ಯಾಲಯದ ಎಲ್ಲಾ ನಿಧಿಗಳನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ನಿರ್ವಹಿಸತಕ್ಕದ್ದು:

ಪರಂತು, ರಾಜ್ಯ ಸರ್ಕಾರವು ನಿಧಿಗಳ ನಿರ್ವಹಣೆಗೆ ಮತ್ತು ಬಳಕೆಗೆ ಸಂಬಂಧಿಸಿದಂತೆ, ಕಾಲಕಾಲಕ್ಕೆ ನಿರ್ದೇಶನಗಳನ್ನು ಹೊರಡಿಸಬಹುದು. ರಾಜ್ಯ ಸರ್ಕಾರದ ನಿರ್ದೇಶನಗಳು ಅಂತಿಮವಾಗಿರತಕ್ಕದ್ದು."

**10. 43ನೇ ಪ್ರಕರಣದ ಪ್ರತಿಯೋಜನೆ.**– ಮೂಲ ಅಧಿನಿಯಮದ 43ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**43. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.**– (1) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳನ್ನು, ಸಿಂಡಿಕೇಟ್‌ನ ನಿರ್ದೇಶನಗಳ ಮೇರೆಗೆ ಸಿದ್ಧಪಡಿಸತಕ್ಕದ್ದು.

(2) ಹಾಗೆ ತಯಾರಿಸಲಾದ ವಾರ್ಷಿಕ ಲೆಕ್ಕಪತ್ರಗಳನ್ನು ಸೆನೆಟ್ಟು ತನ್ನ ಮುಂದಿನ ಸಭೆಯಲ್ಲೇ ಪರಿಶೀಲಿಸತಕ್ಕದ್ದು. ಸೆನೆಟ್ಟು ಅದಕ್ಕೆ ಸಂಬಂಧಿಸಿದ ನಿರ್ಣಯವನ್ನು ಅಂಗೀಕರಿಸಬಹುದು ಮತ್ತು ಅದನ್ನು ಸಿಂಡಿಕೇಟ್‌ಗೆ ತಿಳಿಸತಕ್ಕದ್ದು. ಸಿಂಡಿಕೇಟು, ಸೆನೆಟ್ ನೀಡಿದ ಸಲಹೆ ಸೂಚನೆಗಳನ್ನು ಪರಿಗಣಿಸತಕ್ಕದ್ದು ಮತ್ತು ಅದರ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ತಾನು ಕೈಗೊಂಡ ಕ್ರಮವನ್ನು ಅಥವಾ ಕ್ರಮವನ್ನು ಕೈಗೊಳ್ಳದಿರುವುದಕ್ಕೆ ಕಾರಣಗಳನ್ನು ತನ್ನ ಮುಂದಿನ ಸಭೆಯಲ್ಲಿ ಸೆನೆಟ್‌ಗೆ ತಿಳಿಸತಕ್ಕದ್ದು.

(3) ವಿಶ್ವವಿದ್ಯಾಲಯದ ಲೆಕ್ಕಪತ್ರಗಳನ್ನು, ವರ್ಷಕ್ಕೊಮ್ಮೆ, ಏಪ್ರಿಲ್ ತಿಂಗಳಿನಲ್ಲಿ ರಾಜ್ಯ ಲೆಕ್ಕಪತ್ರಗಳ ನಿಯಂತ್ರಕರು ಲೆಕ್ಕ ಪರಿಶೋಧನೆ ಮಾಡತಕ್ಕದ್ದು.

(4) ಹಾಗೆ ಲೆಕ್ಕ ಪರಿಶೋಧನೆ ಮಾಡಲಾದ ಲೆಕ್ಕಪತ್ರಗಳನ್ನು ಸಿಂಡಿಕೇಟ್ ಮತ್ತು ಸೆನೆಟ್‌ನ ಮುಂದಿಡತಕ್ಕದ್ದು ಮತ್ತು ಆ ತರುವಾಯ ಸೆನೆಟ್ಟಿನ ನಿರ್ಣಯದೊಂದಿಗೆ ಅಭಿಪ್ರಾಯಗಳನ್ನು ಪ್ರತೀ ವರ್ಷದ ಸೆಪ್ಟಂಬರ್ 30ರೊಳಗೆ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು, ತನ್ನ ಮುಂದಿನ ನಿಕಟ ಅಧಿವೇಶನದಲ್ಲಿ ರಾಜ್ಯ ವಿಧಾನಮಂಡಲದ ಎರಡೂ ಸದನಗಳ ಮುಂದೆ ಅದನ್ನು ಮಂಡಿಸತಕ್ಕದ್ದು."

**11. 44ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 44ನೇ ಪ್ರಕರಣದ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ವಾರ್ಷಿಕ ವರದಿ ಮೇಲೆ ಸೆನೆಟ್ ಮಾಡಿರುವ ನಿರ್ಣಯದ ಜೊತೆಗೆ ವಾರ್ಷಿಕ ವರದಿಯ ಪ್ರತಿಗಳನ್ನು, ಪ್ರತಿವರ್ಷದ ಸೆಪ್ಟಂಬರ್ 30ರೊಳಗೆ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು ತನ್ನ ಮುಂದಿನ ನಿಕಟ ಅಧಿವೇಶನದಲ್ಲಿ ರಾಜ್ಯ ವಿಧಾನ ಮಂಡಲದ ಎರಡೂ ಸದನಗಳ ಮುಂದೆ ಅದನ್ನು ಮಂಡಿಸತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಮುಂದಿನವುಗಳಿಗಾಗಿ ಉಪಬಂಧ ಕಲ್ಪಿಸಲು ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1994ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ,–

(i) ವಿಶ್ವವಿದ್ಯಾಲಯದ ಸೆನೆಟ್‌ನಲ್ಲಿ ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಯವರನ್ನು ಸೇರಿಸುವುದು;

(ii) ವಿಶ್ವವಿದ್ಯಾಲಯದ ಸಿಂಡಿಕೇಟ್‌ನಲ್ಲಿ ವೈದ್ಯಕೀಯ ಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಯವರನ್ನು ಸೇರಿಸುವುದು;

(iii) ಸರ್ಕಾರವು ಆರೋಗ್ಯ ವಿಜ್ಞಾನಗಳ ಕ್ಷೇತ್ರದಲ್ಲಿ ಪರಿಣಿತರಾದ ಆರು ಸದಸ್ಯರನ್ನು ಸಿಂಡಿಕೇಟ್‌ಗೆ ನಾಮನಿರ್ದೇಶನ ಮಾಡುವುದು;

(iv) ನಿಧಿಗಳ ನಿರ್ವಹಣೆಯ ಬಗ್ಗೆ ರಾಜ್ಯ ಸರ್ಕಾರವು ವಿಶ್ವವಿದ್ಯಾಲಯಕ್ಕೆ ನಿರ್ದೇಶನಗಳನ್ನು ನೀಡುವುದು;

(v) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ ಹಾಗೂ ವಾರ್ಷಿಕ ವರದಿಯನ್ನು ಸಿದ್ಧಪಡಿಸುವ ವಿಧಾನವನ್ನು ನಿರ್ದಿಷ್ಟಪಡಿಸುವುದು;

(vi) ವಿಶ್ವವಿದ್ಯಾಲಯದ ಉಪಕುಲಪತಿಯವರ ನೇಮಕಾತಿಗಾಗಿ ಶೋಧನಾ ಸಮಿತಿಯನ್ನು ಪುನರ್ ರಚಿಸುವುದು;

(vii) ಉಪಕುಲಪತಿಯ ಪದಾವಧಿಯನ್ನು ಗೊತ್ತುಪಡಿಸುವುದು;

(viii) ವಿಶ್ವವಿದ್ಯಾಲಯದ ರಿಜಿಸ್ಟ್ರಾರ್, ರಿಜಿಸ್ಟ್ರಾರ್ (ಮೌಲ್ಯಮಾಪನ), ಹಣಕಾಸು ಅಧಿಕಾರಿ ಮತ್ತು ಇತರ ಅಧಿಕಾರಿಗಳ ನೇಮಕಾತಿಯ ವಿಧಾನವನ್ನು ಗೊತ್ತುಪಡಿಸುವುದು; ಮತ್ತು

(ix) ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ಕ್ಕೆ ಅನುಸಾರವಾಗಿ ಕೆಲವು ವಿವೇಚನಾಯುಕ್ತ ಮತ್ತು ಪ್ರಾಸಂಗಿಕವಾದ ತಿದ್ದುಪಡಿಗಳನ್ನು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಡಾ॥ ಶರಣ ಪ್ರಕಾಶ್ ಆರ್. ಪಾಟೀಲ್**
ವೈದ್ಯಕೀಯ ಶಿಕ್ಷಣದ ರಾಜ್ಯ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ
## ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 44) ಉದ್ಧೃತ ಭಾಗ

**XX XX XX**

**12. ಉಪ-ಕುಲಪತಿ.**– (1) **XX XX XX**

(3)(2)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಿರುವ ಸಮಿತಿಯು ಸರ್ಕಾರವು ನಾಮನಿರ್ದೇಶಿಸಿದ ವ್ಯಕ್ತಿಯನ್ನು ಸಮಿತಿಯು ಸಮಾವೇಶಕನಾಗಿ ಮತ್ತು ವಿಶ್ವವಿದ್ಯಾಲಯದ ಸಿಂಡಿಕೇಟಿನಿಂದ ನಾಮನಿರ್ದೇಶಿತರಾದ ಇಬ್ಬರು ಸದಸ್ಯರನ್ನು ಹೊಂದಿರತಕ್ಕದ್ದು. ವಿಶ್ವವಿದ್ಯಾಲಯ ಅಥವಾ ವಿಶ್ವವಿದ್ಯಾಲಯದ ನಿರ್ವಹಣೆ ಅಥವಾ ನಿಯಂತ್ರಣಕ್ಕೆ ಒಳಪಟ್ಟಿರುವ ಯಾವುದೇ ಕಾಲೇಜಿನೊಂದಿಗೆ ಸಂಬಂಧ ಹೊಂದಿರುವ ಯಾವೊಬ್ಬ ವ್ಯಕ್ತಿಯನ್ನು ಸಮಿತಿಯ ಸದಸ್ಯನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(4)ಉಪ-ಕುಲಪತಿಯು, ಕುಲಪತಿಯ ಇಚ್ಛಾನುಸಾರವಾಗಿ ಮತ್ತು (2)ನೇ ಉಪ-ಪ್ರಕರಣದ ಉಪ-ಬಂಧಗಳಿಗೆ ಒಳಪಟ್ಟು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡತಕ್ಕದ್ದು, ಆದರೆ ಅವನು ಮರು ನೇಮಕಾತಿ ಹೊಂದಲು ಅರ್ಹನಾಗಿರತಕ್ಕದ್ದು:

## *KARNATAKA LEGISLATIVE ASSEMBLY*
## *FOURTEENTH LEGISLATIVE ASSEMBLY*
## *SECOND SESSION*

### *THE KARNATAKA LAND REVENUE (AMENDMENT) BILL, 2013*
### *(L.A. Bill No. 18 of 2013)*

A Bill further to amend the Karnataka Land Revenue Act, 1964.

Whereas, it is expedient further to amend the Karnataka Land Revenue Act, 1964 (Karnataka Act 12 of 1964) for the purposes hereinafter appearing;

Be it enacted by the Karnataka State Legislature in the sixty fourth year of the Republic of India, as follows:-

***1. Short title and commencement.***- (1) This Act may be called the Karnataka Land Revenue (Amendment) Act, 2013.

(2) It shall be deemed to have come into force with effect from 15th day of October, 2013.

***2. Amendment of section 94-A.***- In section 94-A of the Karnataka Land Revenue Act, 1964 (Karnataka Act 12 of 1964) in sub-section (1), for the words "each taluk", the words "each constituency of the Legislative Assembly" shall be substituted.

***3. Repeal and savings.***- (1) The Karnataka Land Revenue (Amendment) Ordinance, 2013 (Karnataka Ordinance No.1 of 2013) is hereby repealed.

(2) Notwithstanding such repeal anything done or any action taken under the principal Act as amended by the said Ordinance shall be deemed to have been done or taken under the principal Act as amended by this Act.

### *STATEMENT OF OBJECTS AND REASONS*

At present the Karnataka Land Revenue Act, 1964 provides for distribution and grant of unauthorisedly cultivated lands through taluk level committee headed by the Member of Legislative Assembly. Consequent to the delimitation of Assembly Constituencies certain areas of taluk gets overlapped with the neighbouring taluks, thereby creating confusion as to which MLA has to be the head of the taluk level Committee.

To remove this anomaly, it was considered necessary to amend the Karnataka Land Revenue Act, 1964 (Karnataka Act 12 of 1964) for providing for separate Committees for each Assembly constituency wherever necessary.

As the matter was urgent and both the Houses of the Karnataka State Legislature were not in session, the Karnataka Land Revenue (Amendment) Ordinance, 2013 (Karnataka Ordinance No.1 of 2013) was promulgated on 15.10.2013.

This Bill seeks to replace the said Ordinance.

Hence, the Bill.

### *EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY*

At present the Karnataka Land Revenue Act, 1964 provides for distribution and grant of unauthorisedly cultivated lands through taluk level committee headed by the Member of Legislative Assembly. Consequent to the delimitation of Assembly Constituencies certain areas of taluk gets overlapped with the neighbouring taluks, thereby creating confusion as to which MLA has to be the head of the taluk level Committee.

To remove this anomaly, it was considered necessary to amend the Karnataka Land Revenue Act, 1964 (Karnataka Act 12 of 1964) for providing for separate Committees for each Assembly constituency wherever necessary.

As the matter was urgent and both the Houses of the Karnataka State Legislature were not in session, the Karnataka Land Revenue (Amendment) Ordinance, 2013 (Karnataka Ordinance No.1 of 2013) was promulgated on 15.10.2013.

***FINANCIAL MEMORANDUM***

There is no extra expenditure involved in the proposed Legislative measure.

***V. SHRINIVASA PRASAD***
Minister for Revenue

***P. OMPRAKASHA***
Secretary
Karnataka Legislative Assembly

***ANNEXURE***

***Extract from the Karnataka Land Revenue Act, 1964***

***(Karnataka Act 12 of 1964)***

***XX XX XX***

***94A. Regularisation of certain cases of unauthorised occupation by constituting committee etc.***—(1) Subject to such rules as may be prescribed, the State Government shall, by notification, constitute for each taluk a committee consisting of such number of members not exceeding five of whom one shall be a member of Legislative Assembly for the purpose of grant of land under sub-section (4).

***XX XX XX***


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫) | ನಂ. ೧೨೯೭ |
| ***Part – IV-A*** | ***Bangalore, Thursday, November 28, 2013 (Margashira 7, Shaka Varsha 1935)*** | ***No. 1297*** |


***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/19/LA Bill/2013, Bangalore, Dated: 28-11-2013***

The following Bill was introduced in Legislative Assembly on 28-11-2013

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಎರಡನೇ ಅಧಿವೇಶನ**

## ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 19)**

ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961, ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ 11), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಅಕ್ಟೋಬರ್ 19ನೇ ದಿನದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. 1963ರ ಕರ್ನಾಟಕ ಅಧಿನಿಯಮ 11ರ ತಿದ್ದುಪಡಿ.–** ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11) 76ಎಫ್ಎಫ್ ಪ್ರಕರಣದಲ್ಲಿ,–

(1) (1)ನೇ ಉಪಪ್ರಕರಣದಲ್ಲಿ, "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳಿಗೆ "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2013ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

(2) (13)ನೇ ಉಪ ಪ್ರಕರಣದಲ್ಲಿ "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2009 ಪ್ರಾರಂಭವಾದ ದಿನಾಂಕದಿಂದ ಒಂದು ವರ್ಷದೊಳಗೆ " ಎಂಬ ಪದಗಳಿಗೆ, ಅಂಕಿಗಳಿಗೆ ಮತ್ತು ಆವರಣ ಚಿಹ್ನೆಗಳಿಗೆ "ನಿಯಮಿಸಬಹುದಾದ ಅಂಥ ಅವಧಿಯೊಳಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**3. 1977ರ ಕರ್ನಾಟಕ ಅಧಿನಿಯಮ 14ರ ತಿದ್ದುಪಡಿ.–** ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ (1977ರ ಕರ್ನಾಟಕ ಅಧಿನಿಯಮ 14) 321–ಎ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ, "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳಿಗೆ "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2013ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

**4. 1964ರ ಕರ್ನಾಟಕ ಅಧಿನಿಯಮ 22ರ ತಿದ್ದುಪಡಿ.–** ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) 187–ಎ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ, "2009ರ ಡಿಸೆಂಬರ್ 3ನೇ ದಿನಾಂಕಕ್ಕೆ" ಎಂಬ ಅಂಕಿಗಳು ಮತ್ತು ಪದಗಳಿಗೆ "ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2013ರ ಪ್ರಾರಂಭದ ದಿನಾಂಕಕ್ಕೆ" ಎಂಬ ಪದಗಳು, ಆವರಣ ಚಿಹ್ನೆಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು.

**5. ನಿರಸನ ಮತ್ತು ಉಳಿಸುವಿಕೆಗಳು.–** (1) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2013 (2013ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಇದನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯವನ್ನು ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಿದ ಮೂಲ ಅಧಿನಿಯಮ ಅಡಿಯಲ್ಲಿ ಮಾಡಲಾಗಿದೆಯೆಂದು ಅಥವಾ ಕೈಗೊಳ್ಳಲಾಗಿದೆಯೆಂದು ಭಾವಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಈ ಮುಂದಿನವುಗಳಿಗೆ ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ 11), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2013ನ್ನು (2013ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಪ್ರಖ್ಯಾಪಿಸಲಾದ ದಿನಾಂಕದವರೆಗಿನ ಅನಧಿಕೃತ ಕಟ್ಟಡಗಳ ಸಕ್ರಮೀಕರಣಕ್ಕಾಗಿ ಕಾಲಮಿತಿಯನ್ನು ವಿಸ್ತರಿಸುವುದು; ಮತ್ತು

(2) ಅನಧಿಕೃತ ಕಟ್ಟಡಗಳ ಸಕ್ರಮೀಕರಣಕ್ಕಾಗಿ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವನ್ನು ಗೊತ್ತುಪಡಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುವುದು.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನ ಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2013 (2013ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಅನ್ನು 19.10.2013ರಂದು ಪ್ರಖ್ಯಾಪಿಸಲಾಗಿತ್ತು.

ಸದರಿ ಅಧ್ಯಾದೇಶಕ್ಕೆ ಬದಲಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಗಳ 80ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ

ಈ ಮುಂದಿನವುಗಳಿಗೆ ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ 11), ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ಮತ್ತು ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ 22) – ಇವುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ, ಎಂದರೆ:–

(1) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2013ನ್ನು (2013ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಪ್ರಖ್ಯಾಪಿಸಲಾದ ದಿನಾಂಕದವರೆಗಿನ ಅನಧಿಕೃತ ಕಟ್ಟಡಗಳ ಸಕ್ರಮೀಕರಣಕ್ಕಾಗಿ ಕಾಲಮಿತಿಯನ್ನು ವಿಸ್ತರಿಸುವುದು; ಮತ್ತು

(2) ಅನಧಿಕೃತ ಕಟ್ಟಡಗಳ ಸಕ್ರಮೀಕರಣಕ್ಕಾಗಿ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವನ್ನು ಗೊತ್ತುಪಡಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುವುದು.

ವಿಷಯವು ತುರ್ತು ಸ್ವರೂಪದ್ದಾಗಿದ್ದುದರಿಂದ ಮತ್ತು ಕರ್ನಾಟಕ ವಿಧಾನ ಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧ್ಯಾದೇಶ, 2013 (2013ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 2) ಅನ್ನು 19.10.2013ರಂದು ಪ್ರಖ್ಯಾಪಿಸಲಾಗಿತ್ತು.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

**ಖಂಡ 2:** ತಿದ್ದುಪಡಿ ಮಾಡಲು ಉದ್ದೇಶಿಸಿದ 76 ಎಫ್ ಎಫ್ ಪ್ರಕರಣದ (13)ನೇ ಉಪಪ್ರಕರಣದ (2)ನೇ ಉಪಖಂಡದಲ್ಲಿ ಅನಧಿಕೃತ ಕಟ್ಟಡದ ಸಕ್ರಮೀಕರಣಕ್ಕಾಗಿ ಯಾವ ಕಾಲಮಿತಿಯೊಳಗೆ ಅರ್ಜಿಯನ್ನು ಸಲ್ಲಿಸಬಹುದೋ ಆ ಕಾಲಮಿತಿಯನ್ನು ಗೊತ್ತುಪಡಿಸುವ ಸಲುವಾಗಿ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ

**ವಿನಯ ಕುಮಾರ ಸೊರಕೆ**
ನಗರಾಭಿವೃದ್ಧಿ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**
**ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11)**
**ಉದ್ಧೃತ ಭಾಗ**

**xx xx xx**

**76 ಎಫ್‌ಎಫ್.**– ನಿರ್ದಿಷ್ಟ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಗಳನ್ನು ಸಕ್ರಮಗೊಳಿಸುವುದು.– (1) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಭೂಮಿಯನ್ನು 14, 14ಎ, 15ನೇ ಪ್ರಕರಣವನ್ನು, 17ನೇ ಪ್ರಕರಣವನ್ನು ಅಥವಾ ವಿನಿಯಮನಗಳನ್ನು ಉಲ್ಲಂಘಿಸಿ ಅಥವಾ 15ನೇ ಪ್ರಕರಣದ ಮೇರೆಗೆ ನೀಡಿದ ಪ್ರಾರಂಭ ಪ್ರಮಾಣಪತ್ರವನ್ನು ಉಲ್ಲಂಘಿಸಿ ಅಭಿವೃದ್ಧಿ ಮಾಡಿರುವಲ್ಲಿ ಅಥವಾ ಭೂ ಬಳಕೆಯಲ್ಲಿ ಬದಲಾವಣೆ ಮಾಡಿರುವಲ್ಲಿ, ಯೋಜನಾ ಪ್ರಾಧಿಕಾರವು, 2009ರ ಡಿಸೆಂಬರ್ 3ನೇ ದಿನಾಂಕಕ್ಕೆ ಮುಂಚೆ ಮಾಡಿದ ಅಂಥ ಅಭಿವೃದ್ಧಿಯನ್ನು ಮತ್ತು ಭೂ ಬಳಕೆಯ ಬದಲಾವಣೆಯನ್ನು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆಯಾಗಿರಬಹುದಾದಂಥ, ಆದರೆ, ಅಭಿವೃದ್ಧಿಯ ಅಂದಾಜು ವೆಚ್ಚವನ್ನು ಮೀರದಂತೆ ನಿಯಮಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು.

**xx xx xx**

(13)ಈ ಪ್ರಕರಣದ ಮೇರೆಗೆ ಸಕ್ರಮ ಕೋರುವ ಯಾರೇ ವ್ಯಕ್ತಿಯು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಮತ್ತು ಕೆಲವು ಇತರ ಕಾನೂನುಗಳ (ತಿದ್ದುಪಡಿ) ಅಧಿನಿಯಮ, 2009 ಪ್ರಾರಂಭವಾದ ದಿನಾಂಕದಿಂದ ಒಂದು ವರ್ಷದೊಳಗೆ ಯೋಜನಾ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸತಕ್ಕದ್ದು.

xx xx xx

**ಕರ್ನಾಟಕ ಪೌರನಿಗಮಗಳ ಅಧಿನಿಯಮ, 1977ರ (1977ರ ಕರ್ನಾಟಕ ಅಧಿನಿಯಮ 14)**
**ಉದ್ಧೃತ ಭಾಗ**

xx xx xx

**321–ಎ.– ಕೆಲವು ಕಾನೂನುಬಾಹಿರ ಕಟ್ಟಡಗಳನ್ನು ಸಕ್ರಮಗೊಳಿಸುವುದು.–** (1) ಈ ಅಧಿನಿಮಯದಲ್ಲಿ ಏನೇ ಒಳಗೊಂಡಿದ್ದರೂ, 300ನೇ ಪ್ರಕರಣವನ್ನು, 321ನೇ ಪ್ರಕರಣವನ್ನು, ಮತ್ತು 423ನೇ ಪ್ರಕರಣದ ಅಡಿಯಲ್ಲಿ ರಚಿಸಿದ ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ಯಾವುದೇ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದ್ದಲ್ಲಿ, ಕಮೀಷನರನು, 2009ರ ಡಿಸೆಂಬರ್ 3ನೇ ದಿನಾಂಕಕ್ಕೆ ಮುಂಚೆ ನಿರ್ಮಿಸಿದ್ದ ಕಟ್ಟಡವನ್ನು ಈ ಮುಂದೆ ಹೇಳಿದ

ನಿರ್ಬಂಧಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು, ಎಂದರೆ:–

xx xx xx

ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 22) ಉದ್ಧೃತ ಭಾಗ

**187–ಎ. ಕೆಲವು ಕಾನೂನುಬಾಹಿರ ಕಟ್ಟಡಗಳನ್ನು ಸಕ್ರಮಗೊಳಿಸುವುದು.–** (1) ಈ ಅಧಿನಿಯದಲ್ಲಿ ಏನೇ ಒಳಗೊಂಡಿದ್ದರೂ, 187ನೇ ಪ್ರಕರಣವನ್ನು ಕಟ್ಟಡ ಉಪವಿಧಿಗಳನ್ನು ಉಲ್ಲಂಘಿಸಿ ಯಾವುದೇ ಕಟ್ಟಡ ನಿರ್ಮಾಣವನ್ನು ಪೂರ್ಣಗೊಳಿಸಿದ್ದಲ್ಲಿ, ಮುನಿಸಿಪಲ್ ಕಮೀಷನರನು, 2009ರ ಡಿಸೆಂಬರ್ 3ನೇ ದಿನಾಂಕಕ್ಕೆ ಮುಂಚೆ ನಿರ್ಮಿಸಿದ್ದ ಕಟ್ಟಡವನ್ನು ಈ ಮುಂದೆ ಹೇಳಿದ ನಿರ್ಬಂಧಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೊಳಪಟ್ಟು ಹಾಗೂ (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಮೊಬಲಗನ್ನು ಸಂದಾಯ ಮಾಡಿದ ಮೇಲೆ ಸಕ್ರಮಗೊಳಿಸಬಹುದು, ಎಂದರೆ:–

xx xx xx

## *KARNATAKA LEGISLATIVE ASSEMBLY*
## *FOURTEENTH LEGISLATIVE ASSEMBLY*
## *SECOND SESSION*

## *THE KARNATAKA TOWN AND COUNTRY PLANNING AND CERTAIN OTHER LAWS (AMENDMENT) BILL, 2013*

### *(L.A. Bill No. 19 of 2013)*

A Bill further to amend the Karnataka Town and Country Planning Act, 1961, the Karnataka Municipal Corporations Act, 1976 and the Karnataka Municipalities Act, 1964.

Whereas it is expedient further to amend the Karnataka Town and Country Planning Act, 1961, (Karnataka Act 11 of 1963) the Karnataka Municipal Corporations Act, 1976(Karnataka Act 14 of 1977) and the Karnataka Municipalities Act, 1964 (Karnataka Act 22 of 1964) for the purposes hereinafter appearing;

Be it enacted by the Karnataka State Legislature in the Sixty Fourth year of the Republic of India as follows:-

***1. Short title and commencement.-*** (1) This Act may be called the Karnataka Town and Country Planning and certain other Laws (Amendment) Act, 2013.

(2) It shall be deemed to have come into force with effect from the $19^{th}$ day of October, 2013.

***2. Amendment of Karnataka Act 11 of 1963.-*** In the Karnataka Town and Country Planning Act, 1961 (Karnataka Act 11 of 1963) in section 76FF,-

(1) in sub-section(1), for the words and figures "the $3^{rd}$ day of December 2009" the words, figures and brackets "the date of commencement of the Karnataka Town and Country Planning and certain other Laws (Amendment) Act, 2013" shall be substituted.

(2) in sub-section (13), for the words, figures and brackets "one year from the date of commencement of the Karnataka Town and Country Planning and certain other Laws (Amendment) Act, 2009" the words "such period as may be prescribed" shall be substituted.

***3. Amendment of Karnataka Act 14 of 1977.-*** In the Karnataka Municipal Corporations Act, 1976 (Karnataka Act 14 of 1977) in section 321A, in sub-section (1), for the words and figures "the $3^{rd}$ day of December 2009" the words, figures and brackets "the date of commencement of the Karnataka Town and Country Planning and certain other Laws (Amendment) Act, 2013" shall be substituted.

***4. Amendment of Karnataka Act 22 of 1964.-*** In the Karnataka Municipalities Act, 1964 (Karnataka Act 22 of 1964) in section 187A, in sub-section (1), for the words and figures "the $3^{rd}$ day of December 2009" the words, figures and brackets " the date of commencement of the Karnataka Town and Country Planning and certain other Laws (Amendment) Act, 2013" shall be substituted.

***5. Repeal and savings.-*** (1) The Karnataka Town and Country Planning and certain other Laws (Amendment) Ordinance, 2013 (Karnataka Ordinance No.2 of 2013) is hereby repealed.

(2) Notwithstanding such repeal anything done or any action taken under the Principal Act as amended by the said Ordinance shall be deemed to have been done or taken under the principal Act as amended by this Act.

***STATEMENT OF OBJECTS AND REASONS***

It is considered necessary to amend the Karnataka Town and Country Planning Act, 1961, (Karnataka Act 11 of 1963) the Karnataka Municipal Corporations Act, 1976 (Karnataka Act 14 of 1977) and the Karnataka Municipalities Act, 1964 (Karnataka Act 22 of 1964) to provide for,-

(1) extension of time limit for regularization of unauthorized constructions till the date of promulgation of the Karnataka Town and country Planning and certain other Laws (Amendment) Ordinance, 2013 (Karnataka Ordinance 2 of 2013); and

(2) empowering the State Government to prescribe the last date for receiving applications for regularization of unauthorized constructions.

As the matter was urgent and both Houses of the Karnataka State Legislature were not in session, the Karnataka Town and Country Planning and certain other laws (Amendment) Ordinance, 2013 (Karnataka Ordinance 2 of 2013) was promulgated on 19.10.2013.

This bill seeks to replace the said ordinance.

Hence the Bill.

***EXPLANATORY STATEMENT AS REQUIRED BY SUB-RULE (1) OF RULE 80 OF THE RULES OF PROCEDURE AND CONDUCT OF BUSINESS IN THE KARNATAKA LEGISLATIVE ASSEMBLY***

It is considered necessary to amend the Karnataka Town and Country Planning Act, 1961, (Karnataka Act 11 of 1963) the Karnataka Municipal Corporations Act, 1976(Karnataka Act 14 of 1977) and the Karnataka Municipalities Act, 1964 (Karnataka Act 22 of 1964) to provide for,-

(1) extension of time limit for regularization of unauthorized constructions till the date of promulgation of the Karnataka Town and country Planning and certain other Laws (Amendment) Ordinance, 2013 (Karnataka Ordinance 2 of 2013); and

(2) empowering the State Government to prescribe the last date for receiving applications for regularization of unauthorized constructions.

As the matter was urgent and both Houses of the Karnataka State Legislature were not in session, the Karnataka Town and Country Planning and certain other laws (Amendment) Ordinance, 2013 (Karnataka Ordinance 2 of 2013) was promulgated on 19.10.2013.

***FINANCIAL MEMORANDUM***

There is no extra expenditure involved in the proposed legislative measure.

***MEMORANDUM REGARDING DELEGATED LEGISLATION***

***Clause 2.-*** In sub-clause (2), in sub-section (13) of section 76FF proposed to be amended, empowers to the State Government to make rules prescribing the time limit within which application for regularization of unauthorized construction may be made to the Planning Authority.

The proposed delegation of legislative power is normal in character.

***VINAY KUMAR SORAKE***
Minister for Urban Development

***P. OMPRAKASHA***
Secretary
Karnataka Legislative Assembly

**_ANNEXURE_**

**_EXTRACT FROM THE KARNATAKA TOWN AND COUNTRY PLANNING ACT, 1961, (KARNATAKA ACT 11 OF 1963)_**

***xx xx xx***

***76 FF. Regularisation of certain development and change of land use.***- (1) Notwithstanding anything contained in this Act, where any land has been developed or change in land use is made in contravention of section 14, 14A, section 15, section 17 or the regulations or in contravention of commencement certificate granted under section 15, the Planning Authority may regularise such development and change of land use made prior to the 3rd day of December, 2009, subject to such rules as may be prescribed and on payment of the prescribed amount, which may be different for different purposes, but not exceeding the estimated cost of the development.

***xx xx xx***

(13) Any person seeking regularization under this section shall make an application to the Planning Authority within one year from the date of commencement of the Karnataka Town and Country Planning and Certain Other Laws (Amendment) Act, 2009.

***xx xx xx***

**_EXTRACT FROM THE KARNATAKA MUNICIPAL CORPORATIONS ACT, 1976 (KARNATAKA ACT 14 OF 1977)_**

***xx xx xx***

***321-A. Regularisation of certain unlawful buildings.***- (1) Notwithstanding anything contained in this Act, when construction of any building is completed in contravention of the section 300, section 321 and building bye laws made under section 423, the Commissioner may regularise building constructed prior to the 3rd day of December 2009 subject to the following restrictions and such rules as may be prescribed and on payment of the amount specified in sub-section (2), namely:-

***xx xx xx***

**_EXTRACT FROM THE KARNATAKA MUNICIPALITIES ACT, 1964 (KARNATAKA ACT 22 OF 1964)_**

***xx xx xx***

***187-A. Regularisation of certain unlawful building.***-(1) Notwithstanding anything contained in this Act, when construction of any building is completed in contravention of section 187 and building bye-laws, the Municipal Commissioner or the Chief Officer, as the case may be, may regularise building constructed prior to the 3rd day of December 2009, subject to the following restrictions and such rules as may be prescribed and on payment of the amount specified in sub-section (2), namely:-

***xx xx xx***


# ವಿಶೇಷ ರಾಜ್ಯ ಪತ್ರಿಕೆ

| ಭಾಗ– **IV-A** | ಬೆಂಗಳೂರು, ಗುರುವಾರ, ನವೆಂಬರ್ ೨೮, ೨೦೧೩ (ಮಾರ್ಗಶಿರ ೭, ಶಕ ವರ್ಷ ೧೯೩೫) | ನಂ. ೧೨೯೮ |
|---|---|---|
| ***Part– IV-A*** | ***Bangalore, Thursday, November 28, 2013 (Margashira 7, Shaka Varsha 1935)*** | ***No. 1298*** |


**_KARNATAKA LEGISLATIVE ASSEMBLY SECRETARIAT_**

**_NOTIFICATION_**

**_No. KLA/LGA/20/LA Bill/2013, Bangalore, Dated: 28-11-2013_**

The following Bill was introduced in Legislative Assembly on 28-11-2013

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ಸಿವಿಲ್ ಸೇವೆಗಳು (ಜಲ ಸಂಪನ್ಮೂಲ ಸೇವೆ) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಶೇಷ ನೇಮಕಾತಿ) ವಿಧೇಯಕ, 2013**

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 20)**

ಕರ್ನಾಟಕ ಸಿವಿಲ್ ಸೇವೆಗಳಲ್ಲಿ (ಜಲ ಸಂಪನ್ಮೂಲ ಸೇವೆಗಳು) ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳನ್ನು ವಿಶೇಷವಾಗಿ ನೇಮಕಾತಿ ಮಾಡಲು ಒಂದು ವಿಧೇಯಕ.

ಕರ್ನಾಟಕದ ಘನ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ: 41145–58/2010 (ಜಿ.ರವಿ ಮತ್ತು ಇತರ 3 ಮಂದಿ) ಮತ್ತು ಇತರ ಸಂಬಂಧಪಟ್ಟ 3 ರಿಟ್ ಅರ್ಜಿಗಳಲ್ಲಿ, ಕರ್ನಾಟಕ ಸಿವಿಲ್ ಸೇವೆಗಳ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಹಾಗೂ ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002, ಇದು ಭಾರತ ಸಂವಿಧಾನದ 16(3)ನೇ ಅನುಚ್ಛೇದ ಹಾಗೂ 14 ಮತ್ತು 16ನೇ ಅನುಚ್ಛೇದಕ್ಕೆ ವಿರುದ್ಧವಾಗಿದ್ದು, ಆರಂಭದಿಂದಲೇ ಶೂನ್ಯವಾಗಿವೆಯೆಂದು ಘೋಷಿಸಿರುವುದರಿಂದ ಮತ್ತು ನಂತರ ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಲಾಗಿರುವ ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆಯನ್ನು ಸರ್ಕಾರವು ಕೂಡಲೇ ಪ್ರಾರಂಭಿಸತಕ್ಕದ್ದೆಂದು ಮತ್ತು ಅದನ್ನು ವಾಸ್ತವಿಕ ಕಾಲಮಿತಿಯು ಒಂದು ವರ್ಷವಾಗಿದ್ದು ಆ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ ಅದನ್ನು ಪೂರ್ಣಗೊಳಿಸತಕ್ಕದ್ದೆಂದು ಉಚ್ಚ ನ್ಯಾಯಾಲಯವು ಮುಂದುವರಿದು ನಿರ್ದೇಶಿಸಿರುವುದರಿಂದ, ಪ್ರಶ್ನಿತ ನಿಯಮಗಳ ಮೇರೆಗೆ ವಿಲೀನಗೊಂಡ/ ನೇಮಕಗೊಂಡ / ಖಾಯಂಗೊಳಿಸಲಾದ ಎಲ್ಲಾ ವ್ಯಕ್ತಿಗಳನ್ನು, ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ರ ಅನುಸಾರವಾಗಿ ನೇಮಕಾತಿಗಳನ್ನು ಮಾಡುವವರೆಗೆ ಅಥವಾ ಒಂದು ವರ್ಷದ ಅವಧಿಯೊಳಗೆ, ಇವೆರಡರಲ್ಲಿ ಯಾವುದು ಮೊದಲೋ ಆವರೆಗೆ ಸೇವೆಯಲ್ಲಿ ಮುಂದುವರಿಸಲು ಅನುಮತಿ ನೀಡಿದೆ.

ಅಲ್ಲದೆ, ಹಿಂದೆ ಹೇಳಲಾದ ವಿಶೇಷ ನಿಯಮಗಳು ಜಾರಿಗೆ ಬಂದ ದಿನಾಂಕವಾದ 11.02.1999ರಂದು ಅಗತ್ಯ ಶೈಕ್ಷಣಿಕ ಅರ್ಹತೆಯನ್ನು ಮತ್ತು ವಯೋಮಿತಿಯನ್ನು ಹೊಂದಿರುವ ಎಲ್ಲಾ ವ್ಯಕ್ತಿಗಳು ಈ ಖಾಲಿ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಿದ್ದಂಥ ಖಾಲಿ ಸ್ಥಾನಗಳನ್ನು ತುಂಬಲು ದಿನಾಂಕ: 11.02.1999ರಂದು ಅಗತ್ಯ ಅರ್ಹತೆಯನ್ನು ಹೊಂದಿರುವ ವ್ಯಕ್ತಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಘನ ಸರ್ವೋಚ್ಚ ನ್ಯಾಯಲಯವು, 38345–38397/2012 ಸಂಖ್ಯೆಯ ಎಸ್‌ಎಲ್‌ಪಿ ಅರ್ಜಿಯನ್ನು ವಜಾಗೊಳಿಸಿ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮತ್ತು ಅವನ ನೇಮಕದ ಪ್ರಾರಂಭದ ಸಮಯದಲ್ಲಿ ಅರ್ಹನಾಗಿದ್ದ ಯಾರೇ ವ್ಯಕ್ತಿಯು ಅವನಿಗೆ ವಯಸ್ಸು ಮೀರಿದ್ದರೂ ಸಹ ನೀಡಿದ ಯಾವುದೇ ಜಾಹೀರಾತಿನ ಅನುಸಾರವಾಗಿ ಅರ್ಜಿ ಸಲ್ಲಿಸಬಹುದೆಂಬಷ್ಟು ಮಟ್ಟಿಗೆ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಮಾರ್ಪಾಟು ಮಾಡಿರುವುದರಿಂದ;

ಘನ ಸರ್ವೋಚ್ಚ ನ್ಯಾಯಾಲಯವು, ಉಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಆಯ್ಕೆ ಪ್ರಕ್ರಿಯೆಯು ನ್ಯಾಯಾಲಯದ ಆದೇಶದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ಮುಕ್ತಾಯಗೊಳ್ಳದಿದ್ದರೆ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು 13.12.2013ರಿಂದ ಜಾರಿಗೆ ಬರುವಂತೆ ಕಾರ್ಯನಿರ್ವಹಿಸುವುದನ್ನು ನಿಲ್ಲಿಸತಕ್ಕದ್ದೆಂದು ಅಭಿಪ್ರಾಯಪಟ್ಟಿರುವುದರಿಂದ;

ಅದರಿಂದಾಗಿ, ಅಪಾರ ಸಂಖ್ಯೆಯ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ಸೇವೆಗಳು ಅಸ್ತಿತ್ವದಲ್ಲಿರುವುದು ನಿಂತುಹೋಗುತ್ತದೆ ಹಾಗೂ ಬಚಾವತ್ ಐತೀರ್ಪು ಮತ್ತು ಇತ್ತೀಚೆಗೆ ಹೊರಡಿಸಿದ ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ ಐತೀರ್ಪು–IIನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ವ ಬ್ಯಾಂಕ್‌ನ ನೆರವಿನಿಂದ ಕೈಗೆತ್ತಿಕೊಳ್ಳಲಾದ ಪ್ರಗತಿಯಲ್ಲಿರುವ ಯೋಜನೆಗಳನ್ನು ನಿಲ್ಲಿಸಬೇಕಾಗುವ ಕಾರಣದಿಂದ ರಾಜ್ಯದ ಹಿತಾಸಕ್ತಿಯು ಅಪಾಯಕ್ಕೆ ಸಿಲುಕುತ್ತದೆ.

ಕರ್ನಾಟಕ ರಾಜ್ಯಕ್ಕೆ, ಪ್ರಗತಿಯಲ್ಲಿರುವ ಯೋಜನೆಗಳನ್ನು ಪೂರ್ಣಗೊಳಿಸಬೇಕಾದ ಹಾಗೂ ರಾಜ್ಯದ ರೈತರ ಮಹತ್ವದ ಹಿತಾಸಕ್ತಿಯನ್ನು ಕಾಪಾಡಲು ತನ್ನ ಪಾಲಿನ ನೀರನ್ನು ಬಳಸಿಕೊಳ್ಳಲು ಮುಂದಿನ ಯೋಜನೆಗಳನ್ನೂ ಸಹ ಕೈಗೆತ್ತಿಕೊಳ್ಳಬೇಕಾದ ಬಾಧ್ಯತೆಯಿರುವುದರಿಂದ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ 2002ರ ನಿಯಮಗಳ ಅಡಿಯಲ್ಲಿ ವಿಲೀನಗೊಳಿಸಲಾದ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳು ಸಲ್ಲಿಸಿರುವ ಸುದೀರ್ಘ ವರ್ಷಗಳ ಸೇವೆಯನ್ನು ಮತ್ತು ಅವರ ಅನುಭವವನ್ನು ಬಳಸಿಕೊಳ್ಳುವ ಅಗತ್ಯವಿರುವುದರಿಂದ;

ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ಒಂದು ಬಾರಿಯ ಕಾರ್ಯಾಚರಣೆಯ ನಿಯಮಗಳಾಗಿದ್ದು, ಮೇಲೆ ಉಲ್ಲೇಖಿಸಲಾದ ತೀರ್ಪುಗಳಿಗೆ ಅನುಸಾರವಾಗಿ ನೇಮಕ ಮಾಡಬೇಕಾದ ಅಭ್ಯರ್ಥಿಗಳಿಗೆ ಅನ್ವಯವಾಗುವ ವಯೋಮಿತಿಗೆ ಸಂಬಂಧಿಸಿದಂತೆ ಅದರಲ್ಲಿ ಕೆಲವು ಮಾರ್ಪಾಟು ಮಾಡುವುದು ಅಗತ್ಯವಿರುವುದರಿಂದ, ಮತ್ತು ಕರ್ನಾಟಕ ಸಿವಿಲ್ ಸೇವೆಗಳು (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002ರ ಮೇರೆಗೆ ವಿಲೀನಗೊಳಿಸಲಾದ 417 ಇಂಜಿನಿಯರ್‌ಗಳ ಹಿತಾಸಕ್ತಿಯನ್ನು ಸಂರಕ್ಷಿಸುವುದಕ್ಕಾಗಿ ಹಾಗೂ ರಾಜ್ಯ ಸರ್ಕಾರದಲ್ಲಿ ಅವರು ಸಲ್ಲಿಸಿರುವ ಸುದೀರ್ಘ ಸೇವೆಯನ್ನು ಪರಿಗಣಿಸುವುದಕ್ಕಾಗಿ ಮತ್ತು ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಉಪಬಂಧಿಸುವುದು ಸಹ ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ಅರವತ್ತನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದ ಮೂಲಕ ಈ ಮುಂದಿನಂತೆ ಅಧಿನಿಯಮಿಸಲಾಗಿದೆ:–

1. **ಚಿಕ್ಕ ಹೆಸರು, ಪ್ರಾರಂಭ ಮತ್ತು ಅನ್ವಯ.–** (1)ಈ ಅಧಿನಿಯಮವನ್ನು ಕರ್ನಾಟಕ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳು) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಶೇಷ ನೇಮಕಾತಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

(3) ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ನೇಮಕಾತಿ) ನಿಯಮಗಳು, 1988 ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಮೇರೆಗೆ ರಚಿಸಲಾದ ಅಥವಾ ರಚಿಸಲಾಗಿದೆಯೆಂದು ಭಾವಿಸಲಾದ ಯಾವುದೇ ಇತರ ನಿಯಮದಲ್ಲಿ, ಅಥವಾ ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶದಲ್ಲಿ ಏನೇ ಇದ್ದರೂ, ಈ ಅಧಿನಿಯಮವು, ಕರ್ನಾಟಕ ಸಿವಿಲ್ ಸೇವೆಗಳ (ಜಲಸಂಪನ್ಮೂಲ ಸೇವೆಗಳು) ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗಳ ಪ್ರವರ್ಗಗಳಲ್ಲಿರುವ 550 ಅಥವಾ ಅಂಥ ಹೆಚ್ಚುವರಿ ಸಂಖ್ಯೆಯ ಖಾಲಿಹುದ್ದೆಗಳ ನೇರ ನೇಮಕಾತಿಗೆ ಅನ್ವಯವಾಗತಕ್ಕದ್ದು:

ಪರಂತು, ಈ ಅಧಿನಿಯಮದಲ್ಲಿ ಇರುವುದು ಯಾವುದೂ, ಒಂದಕ್ಕಿಂತ ಹೆಚ್ಚಿನ ನೇಮಕಾತಿಗೆ ಅನ್ವಯವಾಗತಕ್ಕದ್ದಲ್ಲ.

2. **ಪರಿಭಾಷೆಗಳು.**– (1) ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು" ಎಂದರೆ, ಕರ್ನಾಟಕ ಸಿವಿಲ್ ಸೇವಾ (ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಆಧಾರದ ಮೇಲೆ ಜಲ ಸಂಪನ್ಮೂಲ ಸೇವೆಗಳಲ್ಲಿ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ವಿಲೀನತೆ) (ವಿಶೇಷ) ನಿಯಮಗಳು, 2002ರ ಮೇರೆಗೆ ಪರಿಭಾಷಿಸಿದಂತಹ ಮತ್ತು ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) ಇಲಾಖೆಯಲ್ಲಿ ವಿಲೀನಗೊಂಡಂತಹ ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳು;

(ಬಿ) "ಆಯ್ಕೆ ಪ್ರಾಧಿಕಾರ" ಎಂದರೆ, ರಾಜ್ಯ ಸರ್ಕಾರವು, ಈ ಸಂಬಂಧದಲ್ಲಿ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಅಧಿಕಾರಿ ಅಥವಾ ಪ್ರಾಧಿಕಾರ.

(2) ಈ ಅಧಿನಿಯಮದಲ್ಲಿ ಬಳಸಿದ ಆದರೆ ಇಲ್ಲಿ ಪರಿಭಾಷಿಸಿಲ್ಲದ ಪದಗಳು ಮತ್ತು ಪದಾವಳಿಗಳು, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರಲ್ಲಿ ಇರುವಂಥ ಅರ್ಥವನ್ನೇ ಹೊಂದಿರತಕ್ಕದ್ದು.

3. **ಆಯ್ಕೆ ಪ್ರಾಧಿಕಾರ.**– (1) ಈ ಅಧಿನಿಯಮದ ಮೇರೆಗೆ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗಳಿಗೆ ಅಭ್ಯರ್ಥಿಗಳ ಆಯ್ಕೆಯನ್ನು ಆಯ್ಕೆ ಪ್ರಾಧಿಕಾರವು ಮಾಡತಕ್ಕದ್ದು.

(2) ಆಯ್ಕೆ ಪ್ರಾಧಿಕಾರವು, 7ನೇ ಪ್ರಕರಣಕ್ಕೆ ಅನುಸಾರವಾಗಿ ಆಯ್ಕೆಯಾದ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ತಯಾರಿಸತಕ್ಕದ್ದು.

4. **ವಯೋಮಿತಿ.**– ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ

6ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ವಯೋಮಿತಿಗೆ ಅನುಸಾರವಾಗಿ ದಿನಾಂಕ:11.02.1999ರಂದು ಅರ್ಹರಾಗಿರುವ ಅಭ್ಯರ್ಥಿಗಳು ಮಾತ್ರ ಈ ಅಧಿನಿಯಮದ ಅಡಿಯಲ್ಲಿನ ನೇಮಕಾತಿಗೆ ಅರ್ಜಿಸಲ್ಲಿಸಲು ಅರ್ಹರಾಗಿರತಕ್ಕದ್ದು:

ಪರಂತು, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳಿಗೆ ಅಥವಾ ಕಿರಿಯ ಇಂಜಿನಿಯರುಗಳಿಗೆ ಸಂಬಂಧಿಸಿದಂತೆ ನಿಯಮಿಸಲಾದ ಗರಿಷ್ಠ ವಯೋಮಿತಿಯನ್ನು ದಿನಾಂಕ 11.02.1999ರಂದು ಇದ್ದಂತೆ, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಮೇಲೆ ಅವರು ಸೇವೆಯನ್ನು ಸಲ್ಲಿಸಿದ ಸಂಖ್ಯೆಯ ವರ್ಷಗಳಷ್ಟು ಸಡಿಲಗೊಳಿಸತಕ್ಕದ್ದು.

5. **ಅರ್ಹತೆ.**– ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗೆ ಈ ಅಧಿನಿಯಮದ ಅಡಿಯಲ್ಲಿ ನೇಮಕವನ್ನು ಮಾಡುವ ಉದ್ದೇಶಕ್ಕಾಗಿ ಇರಬೇಕಾದ ಅರ್ಹತೆಯು, ದಿನಾಂಕ 11.02.1999 ರಂದು ಇದ್ದಂತೆ, ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆ) (ನೇಮಕಾತಿ) ನಿಯಮಗಳು, 1998ರಲ್ಲಿ ಅನುಕ್ರಮವಾಗಿ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ಹುದ್ದೆಗೆ ನಿರ್ದಿಷ್ಟಪಡಿಸಲಾದ ಅರ್ಹತೆಯೇ ಆಗಿರತಕ್ಕದ್ದು. ದಿನಾಂಕ 11.02.1999ರಂದು ಇದ್ದಂತೆ ಮೇಲ್ಕಂಡ ಅರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳು ಮಾತ್ರ ಅರ್ಜಿಸಲ್ಲಿಸಲು ಅರ್ಹರಾಗಿರತಕ್ಕದ್ದು.

6. **ನೇಮಕಾತಿಗೆ ಅರ್ಜಿ.**– ಆಯ್ಕೆ ಪ್ರಾಧಿಕಾರವು, ಅರ್ಹತಾ ಷರತ್ತುಗಳು, ಆಯ್ಕೆಯ ಸ್ವರೂಪ, ಭರ್ತಿ ಮಾಡಬೇಕಾದ ಖಾಲಿಹುದ್ದೆಗಳ ಸಂಖ್ಯೆ ಮತ್ತು ಜಾರಿಯಲ್ಲಿರುವ ಮೀಸಲಾತಿ ಆದೇಶಗಳಿಗೆ ಅನುಸಾರವಾದ ವರ್ಗೀಕರಣವನ್ನು ನಿರ್ದಿಷ್ಟಪಡಿಸಿ ಸರ್ಕಾರಿ ರಾಜ್ಯ ಪತ್ರದಲ್ಲಿ ಖಾಲಿ ಹುದ್ದೆಗಳ ಬಗ್ಗೆ ಜಾಹೀರಾತು ನೀಡತಕ್ಕದ್ದು ಮತ್ತು ಉದ್ದೇಶಿತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸತಕ್ಕದ್ದು. ಅಂಥ ಜಾಹೀರಾತಿನ ಸಾರಾಂಶವನ್ನು ರಾಜ್ಯದಲ್ಲಿ ವ್ಯಾಪಕವಾಗಿ ಪ್ರಸಾರದಲ್ಲಿರುವ ಎರಡು ವಾರ್ತಾ ಪತ್ರಿಕೆಗಳಲ್ಲಿಯೂ ಸಹ ಪ್ರಕಟಿಸತಕ್ಕದ್ದು.

7. **ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವಿಧಾನ.**– (1) ಆಯ್ಕೆ ಪ್ರಾಧಿಕಾರವು, ಅರ್ಹತಾ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಒಟ್ಟು ಅಂಕಗಳ ಶೇಕಡಾವಾರಿನ ಆಧಾರದ ಮೇಲೆ ಮತ್ತು ಈ ಅಧಿನಿಯಮದ ಮೇರೆಗೆ ಅನುಮತಿಸಲಾದ ಕೃಪಾಂಕವನ್ನು ಪರಿಗಣನೆಗೆ ತೆಗೆದುಕೊಂಡು, ಮತ್ತು ಪರಿಶಿಷ್ಟ ಜಾತಿಗಳು, ಪರಿಶಿಷ್ಟ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗಾಗಿ ಮೀಸಲಾತಿಯನ್ನು ಒದಗಿಸುವ ಜಾರಿಯಲ್ಲಿರುವ ಆದೇಶಗಳಿಗೆ ಅಥವಾ ಜಾರಿಯಲ್ಲಿರುವ ಕಾನೂನಿನ ಪ್ರಕಾರ ಯಾವುದೇ ಇತರ ಮೀಸಲಾತಿಗೆ ಒಳಪಟ್ಟು, ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳ ಹುದ್ದೆಗಳಿಗೆ ಈ ಅಧಿನಿಯಮದ ಮೇರೆಗೆ ನೇಮಕ ಮಾಡಲು ಅರ್ಹರಾಗಿರುವ ಅಭ್ಯರ್ಥಿಗಳ ಪಟ್ಟಿಗಳನ್ನು ಮೆರಿಟ್ ಅನುಸಾರವಾಗಿ ತಯಾರಿಸತಕ್ಕದ್ದು. ಎರಡು ಅಥವಾ ಹೆಚ್ಚಿನ ಅಭ್ಯರ್ಥಿಗಳು ಪಡೆದಿರುವ ಅಂಕಗಳು ಸಮನಾಗಿದ್ದರೆ, ಅಂಥ ಅಭ್ಯರ್ಥಿಗಳ ಸಂಬಂಧದಲ್ಲಿ ಮೆರಿಟ್ ಕ್ರಮಾಂಕವನ್ನು ಅವರ ವಯಸ್ಸಿನ ಆಧಾರದ ಮೇಲೆ, ವಯಸ್ಸಿನಲ್ಲಿ ಹಿರಿಯನಾದವನನ್ನು ಕಿರಿಯನಿಗಿಂತ ಮೇಲಿನ ಸ್ಥಾನದಲ್ಲಿ ನಿಗದಿಪಡಿಸತಕ್ಕದ್ದು. ಹುದ್ದೆಗಳ ಮೀಸಲಾತಿ ಉದ್ದೇಶಕ್ಕಾಗಿ ಆದಾಯವನ್ನು ನಿರ್ಧರಿಸುವ ಸಂದರ್ಭದಲ್ಲಿ, ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳ ಸಂಬಳದ ಆದಾಯವನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ.

(2) (1)ನೇ ಉಪ–ಪ್ರಕರಣದ ಮೇರೆಗೆ ಆಯ್ಕೆಮಾಡಬೇಕಾದ ಅಭ್ಯರ್ಥಿಗಳ ಸಂಖ್ಯೆಯು ಅಧಿಸೂಚಿಸಿದ ಖಾಲಿಹುದ್ದೆಗಳ ಸಂಖ್ಯೆಗೆ ಸಮನಾಗಿರತಕ್ಕದ್ದು:

ಪರಂತು, ಮೇಲಿನ ಪಟ್ಟಿಗಳನ್ನು ತಯಾರಿಸುವಾಗ,–

(ಎ) ಅಭ್ಯರ್ಥಿಯು, ರಾಜ್ಯದ ನೀರಾವರಿ ಇಲಾಖೆಯಲ್ಲಿ, ಸಂಧರ್ಭಾನುಸಾರ, ಸಹಾಯಕ ಇಂಜಿನಿಯರ್ ಅಥವಾ ಕಿರಿಯ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ್ದರೆ, ಅಂಥ ಅಭ್ಯರ್ಥಿಯು ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡಾವಾರಿಗೆ ಗರಿಷ್ಠ ಶೇಕಡಾ ಮೂವತ್ತಕ್ಕೆ ಒಳಪಟ್ಟು, ಪ್ರತೀ ಸೇವಾ ವರ್ಷಕ್ಕೆ ಶೇಕಡಾ ಐದರಷ್ಟು ಕೃಪಾಂಕವನ್ನು ಸೇರಿಸತಕ್ಕದ್ದು.

(ಬಿ) ಸ್ಥಳಾಂತರಿತ ಕುಟುಂಬಗಳಿಗೆ ಸೇರಿದ ಅಭ್ಯರ್ಥಿಗಳ ಸಂದರ್ಭದಲ್ಲಿ, ಅರ್ಹತಾ ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳಿಗೆ ಶೇಕಡಾ ಒಂದರಷ್ಟು ಕೃಪಾಂಕವನ್ನು ಸೇರಿಸತಕ್ಕದ್ದು.

**ವಿವರಣೆ 1:** (ಎ) ಖಂಡದ ಮೇರೆಗೆ ಕೃಪಾಂಕವನ್ನು ನೀಡುವ ಉದ್ದೇಶಕ್ಕಾಗಿ, ಒಂದು ವರ್ಷದ ಭಾಗಶ: ಕಾಲ ಸಲ್ಲಿಸಿದ ಸೇವೆಯನ್ನು ಇಡೀ ವರ್ಷ ಸಲ್ಲಿಸಿದ ಸೇವೆಯೆಂದು ಸಹ ಪರಿಗಣಿಸತಕ್ಕದ್ದು.

**ವಿವರಣೆ 2:** ಒಬ್ಬ ವ್ಯಕ್ತಿಗೆ ಸಂಬಂಧಿಸಿದಂತೆ ಸ್ಥಳಾಂತರಿತ ಕುಟುಂಬ ಎಂದರೆ, ನೀರಾವರಿ ಯೋಜನೆಯ ಉದ್ದೇಶಕ್ಕಾಗಿ, ಬಾಧಿತ ವಲಯದಲ್ಲಿ ಗ್ರಾಮಠಾಣಾ ಫ್ಲಾಟನ್ನು ಅಥವಾ ಇತರ ಸ್ವತ್ತನ್ನೂ ಒಳಗೊಂಡಂತೆ ಅಂಥ ಭೂಮಿಯನ್ನು ಸ್ವಾಧೀನಪಡಿಸಿಕೊಂಡ ಕಾರಣದಿಂದ ಈ ಭೂಮಿ ಅಥವಾ ಇತರ ಸ್ವತ್ತಿನಿಂದ ಸ್ಥಳಾಂತರಿಸಲಾಗಿರುವ ಯಾರೇ ವ್ಯಕ್ತಿ, ಗಂಡ ಅಥವಾ ಸಂದರ್ಭಾನುಸಾರ ಹೆಂಡತಿ, ಅಥವಾ ಅಂಥ ವ್ಯಕ್ತಿ ಹಾಗೂ ಅವರೊಂದಿಗೆ ವಾಸಿಸುವ ಹಾಗೂ ಅವರ ಮೇಲೆ ಅಥವಾ ಜೀವನೋಪಾಯಕ್ಕೆ ಅವರನ್ನು ಅವಲಂಬಿಸಿದ ಅವರ ಮಗ ಹಾಗೂ ಅವಿವಾಹಿತ ಮಗಳು ಹಾಗೂ ಹಿಡುವಳಿ ದಾರನಾಗಿರುವಂಥ, ಗೇಣಿದಾರನಾಗಿರುವಂಥ ವ್ಯಕ್ತಿ, ಸರ್ಕಾರಿ ಗೇಣಿದಾರ ಅಥವಾ ಸ್ವತ್ತಿನ ಮಾಲೀಕ. ಸ್ಥಳಾಂತರಿತ ಕುಟುಂಬಕ್ಕೆ ಸಂಬಂಧಿಸಿದಂತೆ ಪ್ರಮಾಣ ಪತ್ರವನ್ನು ನೀಡುವ 'ಪ್ರಾಧಿಕಾರಿ'ಯು ಜಿಲ್ಲಾಧಿಕಾರಿಯಾಗಿರತಕ್ಕದ್ದು.

(3) ಆಯ್ಕೆ ಪಟ್ಟಿಯನ್ನು, ಆಯ್ಕೆ ಪ್ರಾಧಿಕಾರದ ಕಛೇರಿಯ ಸೂಚನಾ ಫಲಕದಲ್ಲಿ ಮತ್ತು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

**8. ಅಭ್ಯರ್ಥಿಗಳ ನೇಮಕಾತಿ.–** (1) ಆಯ್ಕೆ ಪ್ರಾಧಿಕಾರವು ಯಾರ ಹೆಸರುಗಳನ್ನು ಆಯ್ಕೆ ಪಟ್ಟಿಯಲ್ಲಿ ಸೇರಿಸಿ, ಲಭ್ಯವಾಗುವಂತೆ ಮಾಡಿದೆಯೋ ಆ ಅಭ್ಯರ್ಥಿಗಳನ್ನು, ಅಂತಿಮ ಆಯ್ಕೆ ಪಟ್ಟಿಯಲ್ಲಿ ಅವರ ಹೆಸರುಗಳು ಕಂಡುಬರುವಂಥ ಕ್ರಮದಲ್ಲಿ, ನೇಮಕಾತಿ ಪ್ರಾಧಿಕಾರವು ನೇಮಕ ಮಾಡಿಕೊಳ್ಳತಕ್ಕದ್ದು. ಅಂಥ ನೇಮಕಾತಿಯನ್ನು ಮಾಡಿಕೊಳ್ಳುವ ಮುಂಚೆ, ನೇಮಕಾತಿ ಪ್ರಾಧಿಕಾರವು, ನೇಮಕಾತಿಗಾಗಿ ಅಭ್ಯರ್ಥಿಯು ಸೂಕ್ತನಾಗಿರುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸಿವಿಲ್ ಸೇವಾ(ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪಬಂಧಗಳಿಗೆ ಅನುಸಾರವಾಗಿ ಅವರ ಪೂರ್ವನಡತೆ ಮತ್ತು ದೈಹಿಕ ಧಾರ್ಢ್ಯತೆ ಬಗ್ಗೆ ತಾನು ಮನವರಿಕೆ ಮಾಡಿಕೊಳ್ಳತಕ್ಕದ್ದು.

(2) ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಯ ಹೆಸರು ಸೇರಿರುವ ಮಾತ್ರಕ್ಕೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ಪ್ರಾಪ್ತವಾಗತಕ್ಕದ್ದಲ್ಲ.

(3) ಅರ್ಹ ಅಭ್ಯರ್ಥಿಗಳನ್ನು ಆಯ್ಕೆಮಾಡುವ ಮತ್ತು ಅಂಥ ಹೆಸರುಗಳನ್ನು ಅಧಿಸೂಚಿಸುವ ಇಡೀ ಪ್ರಕ್ರಿಯೆಯನ್ನು, ಸಾಧ್ಯವಾದಷ್ಟು ಮಟ್ಟಿಗೆ, ಈ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದೊಳಗೆ ಪೂರ್ಣಗೊಳಿಸತಕ್ಕದ್ದು.

9. **ಆಯ್ಕೆ ಪಟ್ಟಿಯು ಚಾಲ್ತಿಯಲ್ಲಿರುವ ಅವಧಿ.–** ಆಯ್ಕೆ ಪ್ರಾಧಿಕಾರವು ಆಯ್ಕೆ ಮಾಡಿದ ಮತ್ತು ನೇಮಕಾತಿ ಪ್ರಾಧಿಕಾರಕ್ಕೆ ವಹಿಸಿದ ಅಭ್ಯರ್ಥಿಗಳ ಪಟ್ಟಿಯು, ಪಟ್ಟಿಯಲ್ಲಿ ಸೇರಿಸಿರುವ ಎಲ್ಲಾ ಅಭ್ಯರ್ಥಿಗಳು ನೇಮಕವಾಗುವವರೆಗೆ ಸಿಂಧುವಾಗಿರತಕ್ಕದ್ದು.

10. **ಅಭ್ಯರ್ಥಿಗಳು ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸುವ ಹೊಣೆಗಾರಿಕೆ.–** ಈ ಅಧಿನಿಯಮದ ಮೇರೆಗೆ ಆಯ್ಕೆಯಾದ ಮತ್ತು ನೇಮಕಗೊಂಡ ಅಭ್ಯರ್ಥಿಗಳು, ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಹೊಣೆಗಾರರಾಗಿರತಕ್ಕದ್ದು.

11. **ಹಿಂದಿನ ಸೇವೆಯನ್ನು ಪರಿಗಣಿಸುವುದು.–** ಯಾವುದೇ ನ್ಯಾಯಾಲಯ, ನ್ಯಾಯಾಧಿಕರಣ ಅಥವಾ ಪ್ರಾಧಿಕಾರದ ಯಾವುದೇ ತೀರ್ಪು, ಡಿಕ್ರಿ ಅಥವಾ ಆದೇಶ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ,–

(1) ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು, 2013ರ ಡಿಸೆಂಬರ್ ಹತ್ತನೇ ದಿನದಂದು, ಅವರು ಯಾವ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಆ ಹುದ್ದೆಯನ್ನು ಹೊಂದಿದ್ದರೋ ಅವೇ ನಿಬಂಧನೆಗಳು ಮತ್ತು ಷರತ್ತುಗಳ ಪ್ರಕಾರ ಅವರು ಖಾಯಂ ಆಗಿ ನೇಮಕಗೊಂಡಿದ್ದರೆ ಹೇಗೋ ಹಾಗೆ, ಈ ಅಧಿನಿಯಮದ ಮೇರೆಗೆ ನೇಮಕಾತಿ ಪ್ರಕ್ರಿಯೆ ಪೂರ್ಣವಾಗುವವರೆಗೆ ಸೇವಾ ಷರತ್ತುಗಳಿಗೆ ಸಂಬಂಧಪಡುವ ಎಲ್ಲ ಇತರ ನಿಯಮಗಳನ್ನು ಅನ್ವಯಿಸುವುದಕ್ಕೆ ಒಳಪಟ್ಟು ಆ ಹುದ್ದೆಯಲ್ಲಿ ಕಾರ್ಯನಿರ್ವಹಿಸಲು ಮುಂದುವರಿಸತಕ್ಕದ್ದು.

(2) ಕರ್ನಾಟಕ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಹಾಗೂ ತಾತ್ಕಾಲಿಕ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಹಾಗೂ ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002 ಪ್ರಾರಂಭವಾಗುವುದಕ್ಕೆ ಮುಂಚೆ ತಾತ್ಕಾಲಿಕ ಅಥವಾ ಗುತ್ತಿಗೆ ಆಧಾರದ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು ಸಲ್ಲಿಸಿದ ಸೇವೆಯನ್ನು, ರಜೆ, ವೇತನ, ಪಿಂಚಣಿ ಅಥವಾ ಜ್ಯೇಷ್ಠತೆಯ ಉದ್ದೇಶಕ್ಕಾಗಿ ಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ:

ಪರಂತು, ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳು ಹಾಗೂ ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002ರ ಪ್ರಾರಂಭದ ನಂತರ ಮತ್ತು ಈ ಅಧಿನಿಯಮದ ಪ್ರಾರಂಭಕ್ಕೆ ಮುಂಚೆ ಲೋಕೋಪಯೋಗಿ (ನೀರಾವರಿ ಸೇವೆ)ಯಲ್ಲಿ ತಾತ್ಕಾಲಿಕ ಅಥವಾ ಗುತ್ತಿಗೆ ಸಹಾಯಕ ಇಂಜಿನಿಯರುಗಳು ಅಥವಾ ಕಿರಿಯ ಇಂಜಿನಿಯರುಗಳು ಸಲ್ಲಿಸಿದ ಸೇವೆಯನ್ನು, ಅವರ ರಜೆ, ವೇತನ, ಪಿಂಚಣಿ ಅಥವಾ ಜ್ಯೇಷ್ಠತೆ ಉದ್ದೇಶಕ್ಕಾಗಿ ಗಣನೆಗೆ ತೆಗೆದುಕೊಳ್ಳತಕ್ಕದ್ದು:

ಮತ್ತೂ ಪರಂತು, ವೇತನ ನಿಗದಿ ಮತ್ತು ವೇತನ ಸಂರಕ್ಷಣೆಯು ಭಾವನಾತ್ಮಕವಾಗಿರತಕ್ಕದ್ದು ಮತ್ತು ವೇತನದ ಯಾವುದೇ ಬಾಕಿಗಳಿಗೆ ಅವರು ಅರ್ಹರಾಗಿರತಕ್ಕದ್ದಲ್ಲ:

12. **ಇತರ ನಿಯಮಗಳ ಅನ್ವಯ.–** ಕರ್ನಾಟಕ ಸಿವಿಲ್ ಸೇವಾ ನಿಯಮಗಳು, ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977, ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966 ಹಾಗೂ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ ಅಡಿಯಲ್ಲಿ ಮಾಡಲಾದ ಅಥವಾ ಮಾಡಲಾಗಿದೆಯೆಂದು ಭಾವಿಸಲಾದ ಎಲ್ಲಾ ಇತರ ನಿಯಮಗಳ ಉಪಬಂಧಗಳು, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದಿರುವಷ್ಟರ ಮಟ್ಟಿಗೆ, ಈ ಅಧಿನಿಯಮದ ಮೇರೆಗೆ ಆಯ್ಕೆಯಾದ ಮತ್ತು ನೇಮಕಗೊಂಡ ವ್ಯಕ್ತಿಗಳಿಗೆ ಅನ್ವಯವಾಗತಕ್ಕದ್ದು.

**13. ತೊಂದರೆಗಳ ನಿವಾರಣಾಧಿಕಾರ.–** ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಆ ತೊಂದರೆಯನ್ನು ನಿವಾರಿಸಲು ಅಗತ್ಯವೆಂದು ಅಥವಾ ಯುಕ್ತವೆಂದು ಭಾವಿಸುವಂಥ ಉಪಬಂಧಗಳನ್ನು ರಚಿಸಬಹುದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕದ ಘನ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ: 41145–58/2010 (ಜಿ.ರವಿ ಮತ್ತು ಇತರ 3 ಮಂದಿ) ಮತ್ತು ಇತರ ಸಂಬಂಧಪಟ್ಟ 3 ರಿಟ್ ಅರ್ಜಿಗಳಲ್ಲಿ, ಕರ್ನಾಟಕ ಸಿವಿಲ್ ಸೇವೆಗಳ (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಹಾಗೂ ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002, ಇದು ಭಾರತ ಸಂವಿಧಾನದ 16(3)ನೇ ಅನುಚ್ಛೇದ ಹಾಗೂ 14 ಮತ್ತು 16ನೇ ಅನುಚ್ಛೇದಕ್ಕೆ ವಿರುದ್ಧವಾಗಿದ್ದು, ಆರಂಭದಿಂದಲೇ ಶೂನ್ಯವಾಗಿವೆಯೆಂದು ಘೋಷಿಸಿದೆ ಮತ್ತು ನಂತರ ಉಚ್ಚ ನ್ಯಾಯಾಲಯವು ಮುಂದುವರಿದು ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಲಾಗಿರುವ ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆಯನ್ನು ಸರ್ಕಾರವು ಕೂಡಲೇ ಪ್ರಾರಂಭಿಸತಕ್ಕದ್ದೆಂದು ಮತ್ತು ಅದನ್ನು ವಾಸ್ತವಿಕ ಕಾಲಮಿತಿಯು ಒಂದು ವರ್ಷವಾಗಿದ್ದು ಆ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳುಗಳ ಅವಧಿಯೊಳಗೆ ಅದನ್ನು ಪೂರ್ಣಗೊಳಿಸತಕ್ಕದ್ದೆಂದು ನಿರ್ದೇಶಿಸಿದೆ. ಪ್ರಶ್ನಿತ ನಿಯಮಗಳ ಮೇರೆಗೆ ವಿಲೀನಗೊಂಡ/ನೇಮಕಗೊಂಡ/ ಖಾಯಂಗೊಳಿಸಲಾದ ಎಲ್ಲಾ ವ್ಯಕ್ತಿಗಳನ್ನು, ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ರ ಅನುಸಾರವಾಗಿ ನೇಮಕಾತಿಗಳನ್ನು ಮಾಡುವವರೆಗೆ ಅಥವಾ ಒಂದು ವರ್ಷದ ಅವಧಿಯೊಳಗೆ, ಇವೆರಡರಲ್ಲಿ ಯಾವುದು ಮೊದಲೋ ಆವರೆಗೆ ಸೇವೆಯಲ್ಲಿ ಮುಂದುವರಿಸಲು ಅನುಮತಿ ನೀಡಿದೆ.

ಅಲ್ಲದೆ, ಹಿಂದೆ ಹೇಳಲಾದ ವಿಶೇಷ ನಿಯಮಗಳು ಜಾರಿಗೆ ಬಂದ ದಿನಾಂಕವಾದ 11.02.1999ರಂದು ಅಗತ್ಯ ಶೈಕ್ಷಣಿಕ ಅರ್ಹತೆಯನ್ನು ಮತ್ತು ವಯೋಮಿತಿಯನ್ನು ಹೊಂದಿರುವ ಎಲ್ಲಾ ವ್ಯಕ್ತಿಗಳು ಈ ಖಾಲಿ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ. ಪ್ರಶ್ನಿತ ವಿಲೀನ ನಿಯಮಗಳ ಮೇರೆಗೆ ಭರ್ತಿ ಮಾಡಿದ್ದಂಥ ಖಾಲಿ ಸ್ಥಾನಗಳನ್ನು ತುಂಬಲು ದಿನಾಂಕ: 11.02.1999ರಂದು ಅಗತ್ಯ ಅರ್ಹತೆಯನ್ನು ಹೊಂದಿರುವ ವ್ಯಕ್ತಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಘನ ಸರ್ವೋಚ್ಚ ನ್ಯಾಯಲಯವು, 38345–38397/2012 ಸಂಖ್ಯೆಯ ಎಸ್‌ಎಲ್‌ಪಿ ಅರ್ಜಿಯನ್ನು ವಜಾಗೊಳಿಸಿ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮತ್ತು ಅವನ ನೇಮಕದ ಪ್ರಾರಂಭದ ಸಮಯದಲ್ಲಿ ಅರ್ಹನಾಗಿದ್ದ ಯಾರೇ ವ್ಯಕ್ತಿಯು ಅವನಿಗೆ ವಯಸ್ಸು ಮೀರಿದ್ದರೂ ಸಹ ನೀಡಿದ ಯಾವುದೇ ಜಾಹೀರಾತಿನ ಅನುಸಾರವಾಗಿ ಅರ್ಜಿ ಸಲ್ಲಿಸಬಹುದೆಂಬಷ್ಟು ಮಟ್ಟಿಗೆ ಉಚ್ಚ ನ್ಯಾಯಾಲಯದ ನಿರ್ದೇಶನಗಳನ್ನು ಮಾರ್ಪಾಟು ಮಾಡಿರುವುದರಿಂದ;

ಘನ ಸರ್ವೋಚ್ಚ ನ್ಯಾಯಾಲಯವು, ಉಚ್ಚ ನ್ಯಾಯಾಲಯದ ಆದೇಶದ ಪ್ರಕಾರ ಆಯ್ಕೆ ಪ್ರಕ್ರಿಯೆಯು ನ್ಯಾಯಾಲಯದ ಆದೇಶದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ಮುಕ್ತಾಯಗೊಳ್ಳದಿದ್ದರೆ, ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಯಾರೇ ವ್ಯಕ್ತಿಯು 13.12.2013ರಿಂದ ಜಾರಿಗೆ ಬರುವಂತೆ ಕಾರ್ಯನಿರ್ವಹಿಸುವುದನ್ನು ನಿಲ್ಲಿಸತಕ್ಕದ್ದೆಂದು ಅಭಿಪ್ರಾಯಪಟ್ಟಿರುವುದರಿಂದ;

ಅದರಿಂದಾಗಿ, ಅಪಾರ ಸಂಖ್ಯೆಯ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳ ಸೇವೆಗಳು ಅಸ್ತಿತ್ವದಲ್ಲಿರುವುದು ನಿಂತುಹೋಗುತ್ತದೆ ಹಾಗೂ ಬಚಾವತ್ ಐತೀರ್ಪು ಮತ್ತು ಇತ್ತೀಚೆಗೆ ಹೊರಡಿಸಿದ ಕೃಷ್ಣಾ ಜಲ ವಿವಾದ ನ್ಯಾಯಾಧಿಕರಣ ಐತೀರ್ಪು–IIನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಶ್ವ ಬ್ಯಾಂಕ್‌ನ ನೆರವಿನಿಂದ ಕೈಗೆತ್ತಿಕೊಳ್ಳಲಾದ ಪ್ರಗತಿಯಲ್ಲಿರುವ ಯೋಜನೆಗಳನ್ನು ನಿಲ್ಲಿಸಬೇಕಾಗುವ ಕಾರಣದಿಂದ ರಾಜ್ಯದ ಹಿತಾಸಕ್ತಿಯು ಅಪಾಯಕ್ಕೆ ಸಿಲುಕುತ್ತದೆ.

ಕರ್ನಾಟಕ ರಾಜ್ಯಕ್ಕೆ, ಪ್ರಗತಿಯಲ್ಲಿರುವ ಯೋಜನೆಗಳನ್ನು ಪೂರ್ಣಗೊಳಿಸಬೇಕಾದ ಹಾಗೂ ರಾಜ್ಯದ ರೈತರ ಮಹತ್ವದ ಹಿತಾಸಕ್ತಿಯನ್ನು ಕಾಪಾಡಲು ತನ್ನ ಪಾಲಿನ ನೀರನ್ನು ಬಳಸಿಕೊಳ್ಳಲು ಮುಂದಿನ ಯೋಜನೆಗಳನ್ನೂ ಸಹ ಕೈಗೆತ್ತಿಕೊಳ್ಳಬೇಕಾದ ಬಾಧ್ಯತೆಯಿರುವುದರಿಂದ ಮತ್ತು ಸಾರ್ವಜನಿಕ ಹಿತದೃಷ್ಟಿಯಿಂದ 2002ರ ನಿಯಮಗಳ ಅಡಿಯಲ್ಲಿ ವಿಲೀನಗೊಳಿಸಲಾದ ಸಹಾಯಕ ಇಂಜಿನಿಯರುಗಳು ಮತ್ತು ಕಿರಿಯ ಇಂಜಿನಿಯರುಗಳು ಸಲ್ಲಿಸಿರುವ ಸುದೀರ್ಘ ವರ್ಷಗಳ ಸೇವೆಯನ್ನು ಮತ್ತು ಅವರ ಅನುಭವವನ್ನು ಬಳಸಿಕೊಳ್ಳುವ ಅಗತ್ಯವಿರುವುದರಿಂದ;

ಕರ್ನಾಟಕ ಲೋಕೋಪಯೋಗಿ (ನೀರಾವರಿ ಸೇವೆಗಳು) (ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ನೇಮಕಾತಿ) (ವಿಶೇಷ) ನಿಯಮಗಳು, 1998 ಒಂದು ಬಾರಿಯ ಕಾರ್ಯಾಚರಣೆಯ ನಿಯಮಗಳಾಗಿದ್ದು, ಮೇಲೆ ಉಲ್ಲೇಖಿಸಲಾದ ತೀರ್ಪುಗಳಿಗೆ ಅನುಸಾರವಾಗಿ ನೇಮಕ ಮಾಡಬೇಕಾದ ಅಭ್ಯರ್ಥಿಗಳಿಗೆ ಅನ್ವಯವಾಗುವ ವಯೋಮಿತಿಗೆ ಸಂಬಂಧಿಸಿದಂತೆ ಅದರಲ್ಲಿ ಕೆಲವು ಮಾರ್ಪಾಟು ಮಾಡುವುದು ಅಗತ್ಯವಿರುವುದರಿಂದ, ಮತ್ತು ಕರ್ನಾಟಕ ಸಿವಿಲ್ ಸೇವೆಗಳು (ಜಲ ಸಂಪನ್ಮೂಲ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಮತ್ತು ತಾತ್ಕಾಲಿಕ ಉದ್ದೇಶದ ಆಧಾರದ ಮೇಲೆ ನೇಮಕಗೊಂಡ ಸಹಾಯಕ ಇಂಜಿನಿಯರುಗಳ ಮತ್ತು ಕಿರಿಯ ಇಂಜಿನಿಯರುಗಳ ವಿಲೀನ) (ವಿಶೇಷ) ನಿಯಮಗಳು, 2002ರ ಮೇರೆಗೆ ವಿಲೀನಗೊಳಿಸಲಾದ 417 ಇಂಜಿನಿಯರ್‌ಗಳ ಹಿತಾಸಕ್ತಿಯನ್ನು ಸಂರಕ್ಷಿಸುವುದಕ್ಕಾಗಿ ಹಾಗೂ ರಾಜ್ಯ ಸರ್ಕಾರದಲ್ಲಿ ಅವರು ಸಲ್ಲಿಸಿರುವ ಸುದೀರ್ಘ ಸೇವೆಯನ್ನು ಪರಿಗಣಿಸುವುದಕ್ಕಾಗಿ ಉಪಬಂಧಿಸುವುದು ಯುಕ್ತವಾಗಿರುತ್ತದೆ.

ಆದ್ದರಿಂದ ಈ ವಿಧೇಯಕ.

### ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮಗಳಲ್ಲಿ ಒಳಗೊಂಡಿರುವ ಹೆಚ್ಚುವರಿ ವೆಚ್ಚವನ್ನು ಪ್ರಸ್ತುತ ಇರುವ ಆಯವ್ಯಯ ಏರ್ಪಾಟುಗಳಿಂದ ಭರಿಸಲಾಗುವುದು.

**ಎಂ.ಬಿ.ಪಾಟೀಲ್**  
ಜಲ ಸಂಪನ್ಮೂಲ ಸಚಿವರು  
(ಭಾರಿ ಮತ್ತು ಮಧ್ಯಮ ನೀರಾವರಿ)

**ಪಿ. ಓಂಪ್ರಕಾಶ**  
ಕಾರ್ಯದರ್ಶಿ  
ಕರ್ನಾಟಕ ವಿಧಾನ ಸಭೆ

***KARNATAKA LEGISLATIVE ASSEMBLY***
***FOURTEENTH LEGISLATIVE ASSEMBLY***
***SECOND SESSION***

## *THE KARNATAKA CIVIL SERVICES (WATER RESOURCE SERVICE) (SPECIAL RECRUITMENT OF ASSISTANT ENGINEERS AND JUNIOR ENGINEERS) BILL, 2013*

***(L.A. Bill No. 20 of 2013)***

A Bill to make special recruitment of Assistant Engineers and Junior Engineers in the Karnataka Civil Services (Water Resource Services).

Whereas, the High Court of Karnataka in Writ Petition No. 41145-58/2010 (G. Ravi and 3 others) and connected other 3 Writ petitions, has declared that the Karnataka Civil Services (Absorption of Assistant Engineers and Junior Engineers appointed on contract basis and on adhoc basis in Water resources Services) (Special) Rules, 2002 – are contrary to Article 16(3) as well as Article 14 and 16 of the Constitution of India as void ab initio and further directed that the Government shall initiate recruitment process to the posts which were filled up under the impugned Absorption Rules forthwith and complete the same within a period of six months from the date of the order outer limit being one year. All the persons absorbed/appointed/ regularized under the impugned Rules are permitted to continue in service till the recruitments are made in pursuance of the Karnataka Public Works (Irrigation Services)(Recruitment of Assistant Engineers and Junior Engineers)(Special) Rules, 1998, within a period of one year, whichever is earlier.

Further, that eligibility for applying as against these vacancies would be that all persons who possess the requisite educational qualification as well as age as on 11.02.1999, the day on which the aforesaid special rules came into force. Only those persons who possess the requisite qualification as on 11.02.1999 shall be considered for filling up those vacancies which were filled up under the impugned Absorption Rules.

Whereas, the Hon'ble Supreme Court has rejected the SLP application bearing No. 38345-38397/2012 and modified the directions of High Court to the extent that any person who has been working on adhoc basis and was eligible at the initial time of his appointment, can apply in pursuance of any advertisement made even if he has become over aged.

The Hon'ble Supreme Court also held that, if the selection process in pursuance of the order of the High Court is not concluded within a period of one year from date of the Court order, any person working in adhoc basis shall cease to work with effect from 13-12-2013.

Thereby, the services of large number of Assistant Engineers and Junior Engineers will cease to exist and the interest of the State will be jeoparodised on account of stoppage of ongoing projects undertaken with the aid of World Bank keeping in view Bachavat Award and recent award passed by the Krishna Water Disputes Tribunal Award-II;

Whereas, the State of Karnataka is under an obligation to complete ongoing projects and also to undertake further projects to utilize its share of water to serve the large interest of farmers of the State and therefore it is necessary to utilise the long years of service and experience put in by Assistant Engineers and Junior Engineers absorbed in 2002 rules in public interest;

Whereas, the Karnataka Public Works (Irrigation Services) (Recruitment of Assistant Engineers and Junior Engineers) (Special) Rules, 1998 - are one time operational rules and it requires certain modification with reference to the age limit applicable to the candidates to be recruited in accordance with the above cited judgments and whereas it is also expedient to provide for protection of the interest of 417 engineers absorbed under the Karnataka Civil Services (Absorption of Assistant Engineers and Junior Engineers appointed on contract basis and on adhoc basis in Water resources Services) (Special) Rules, 2002 and to consider their long service rendered in the State Government and for the purposes hereinafter appearing;

Be it enacted by the Karnataka State Legislature in the sixty fourth year of the Republic of India as follows:-

***1. Short title commencement and application.-*** (1) This Act may be called the Karnataka Civil Services (Water Resources Services) (Special Recruitment of Assistant Engineers and Junior Engineers) Act, 2013.

(2) It shall come into force at once.

(3) Notwithstanding anything contained in the Karnataka Civil Services (General Recruitment) Rules, 1977 or in the Karnataka Public Works (Irrigation Services) (Recruitment) Rules, 1988 or in any other rule made or deemed to have been made under the Karnataka State Civil Services Act, 1978 (Karnataka Act 14 of 1990) or in any Judgment, decree or Order of any Court, Tribunal or Authority this Act shall apply to the direct recruitment to 550 or such additional number of vacancies in the categories of Posts of Assistant Engineers and Junior Engineers in the Karnataka Civil Services (Water Resource Services):

Provided that nothing in this Act shall apply to more than one recruitment.

***2. Definition.-*** (1) In this Act, unless the context otherwise requires,-

(a) "Adhoc or Contract Assistant Engineers or Junior Engineers" means the adhoc or contract Assistant Engineers or Junior Engineers as defined and absorbed into the Karnataka Public Works (Irrigation Service) under the Karnataka Civil Services (Absorption of Assistant Engineers and Junior Engineers appointed on contract basis and on adhoc basis in Water resources Services) (Special) Rules, 2002;

(b) "selection authority" means such officer or authority as the State Government may by order specify in this behalf.

(2) The words and expressions used in this Act but not defined herein shall have the same meaning as in the Karnataka State Civil Services (General Recruitment) Rules, 1977.

***3. Selection Authority.-***(1) The selection of candidate for the Posts of Assistant Engineers and Junior Engineers under this Act shall be made by the Selection Authority.

(2) The selection authority shall prepare a list of selected candidates in accordance with section 7.

***4. Age.-***The candidate who are eligible as on 11-02-1999 in accordance with the age limit specified in rule 6 of the Karnataka Civil Services (General Recruitment) Rules, 1977 shall only be eligible to apply for the recruitment under this Act:

Provided that the upper age limit prescribed shall be relaxed in respect of adhoc or contract Assistant Engineers or Junior Engineers as on 11-02-1999 by such number of years they have served on Adhoc or contract basis.

***5. Qualification.-*** The qualification for the purpose of recruitment under this Act, to the post of Assistant Engineers and Junior Engineers shall respectively be the qualification specified for the post of the Assistant Engineers and Junior Engineers in the Karnataka Public Works (Irrigation Service) (Recruitment) Rules, 1998 as on 11-02-99. The candidates who possessed with the above qualification as on 11-02-99 shall only be eligible to apply.

***6. Application for Recruitment.-*** Selection Authority shall advertise the vacancies in the official Gazette specifying the conditions of eligibility, the nature of selection, the number of vacancies to be filled and classification in accordance with the orders of reservation in force and invite applications from the intending candidates. Abstract of such advertisement shall also be published in two news papers having wide circulation in the State.

***7. Method of Selection of Candidate.-*** (1) The selection Authority shall on the basis of the aggregate percentage of marks secured by the candidates in the qualifying examination and taking into consideration the weightage allowed under this Act, and subject to orders in force providing for reservation for posts for the Scheduled Castes, Scheduled Tribes and other Backward Classes or any other reservation as per law in force prepare in the order of merit, lists of candidates eligible for appointment under this Act to the posts of Assistant Engineers and Junior Engineers. If the marks obtained by two or more applicants are equal the order of merit in respect of such candidates shall be fixed on the basis of their age, the older, in age being placed above the younger:

Provided that in case of determination of income for the purpose of reservation of posts, salary income of the adhoc or contract Assistant Engineers or Junior Engineers shall not be taken into consideration.

(2) The number of candidates to be selected under sub-section (1) shall be equal to the number of Vacancies notified:

Provided that while preparing the above lists,

(a) A weightage of five percent for each year of service subject to a maximum of thirty percent shall be added to the percentage of total marks secured by the candidate in the qualifying examination, if such candidate has served as Assistant Engineer or Junior Engineer, as the case may be in the Irrigation Department in the State; and

(b) a weightage of one percent shall be added to the percentage of marks secured in the qualifying examination in respect of the candidates belonging to displaced families.

***Explanation 1.-*** For the purpose of the weightage under Clause (a), service rendered for fraction of a year shall also be reckoned as service rendered for a whole year.

***Explanation 2.-*** Displaced family in relation to a person means the individual, the husband or wife as the case may be, or such individual and their son and un-married daughter residing with them and dependent on them or livelihood and such person being a tenure holder, tenant, Government lessee or owner of property has been displaced from this land or other property on account of acquisition of such land including a plot in the Gramathana or other property in the affected zone for the purpose of the Irrigation project. The 'Authority' for issuing the certificate relating to a displaced family shall be the Deputy Commissioner.

ಇಲ್ಲಿ ಇನ್ನುಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ನ್ನು (2010ರ ಕರ್ನಾಟಕ ಅಧಿನಿಯಮ 10) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 12ನೇ ಪ್ರಕರಣದ ತಿದ್ದುಪಡಿ.-** ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರ (2010ರ ಕರ್ನಾಟಕ ಅಧಿನಿಯಮ 10) 12ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:-

"(2) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು,-

| | | |
|---|---|---|
| (i) | ವಿಶ್ವವಿದ್ಯಾಲಯದ ಕುಲಪತಿಯವರು | ಅಧ್ಯಕ್ಷರು |
| (ii) | ಕೃಷಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಜಂಟಿ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |
| (iii) | ಆರ್ಥಿಕ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಉಪ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |
| (iv) | ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿತರಾದ ಜಂಟಿ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ವ್ಯಕ್ತಿ; | ಸದಸ್ಯರು |
| (v) | ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯಲ್ಲಿನ ಮೂವರು ಪ್ರಗತಿಪರ ರೈತರು, ಅವರಲ್ಲಿ ಕನಿಷ್ಠ ಒಬ್ಬರು ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡಿದ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು | ಸದಸ್ಯರು |
| (vi) | ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು, ಧಾರವಾಡ ಮತ್ತು ರಾಯಚೂರು-ಇವುಗಳಿಗೆ ಪ್ರತಿಯೊಂದಕ್ಕೂ ಸಭಾಧ್ಯಕ್ಷರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನಸಭೆಯ ಒಬ್ಬರು ಸದಸ್ಯರು ಮತ್ತು ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಶಿವಮೊಗ್ಗ ಇದಕ್ಕೆ ಸಭಾಪತಿಯವರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ಒಬ್ಬರು ಸದಸ್ಯರು | ಸದಸ್ಯರು |
| (vii) | ಕುಲಾಧಿಪತಿಯವರು ನಾಮನಿರ್ದೇಶನ ಮಾಡುವ ಕೃಷಿ ವಲಯದಲ್ಲಿನ ಒಬ್ಬರು ಖ್ಯಾತ ಶಿಕ್ಷಣ ತಜ್ಞರು ಅಥವಾ ತಜ್ಞರು | ಸದಸ್ಯರು |
| (viii) | ಕುಲಾಧಿಪತಿಯವರು ನಾಮನಿರ್ದೇಶನ ಮಾಡುವ ಒಬ್ಬರು ಕೃಷಿ-ಕೈಗಾರಿಕೋದ್ಯಮಿ ಅಥವಾ ಮಹಿಳಾ ಸಮಾಜ ಸೇವಕಿ | ಸದಸ್ಯರು |
| (ix) | ಮಹಾನಿರ್ದೇಶಕರು ನಾಮನಿರ್ದೇಶನ ಮಾಡುವ ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನಿಂದ ಒಬ್ಬರು ಪ್ರತಿನಿಧಿ | ಸದಸ್ಯರು |
| (x) | ಎರಡು ವರ್ಷಗಳ ಅವಧಿಗೆ ಸುತ್ತು ಸರದಿಯ ಮೂಲಕ ಕುಲಪತಿಯವರು ನಾಮನಿರ್ದೇಶನ ಮಾಡುವ ಒಬ್ಬರು ಡೀನ್ | ಸದಸ್ಯರು |
| (xi) | ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ | ಸದಸ್ಯ-ಕಾರ್ಯದರ್ಶಿ" |

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಭಾರತ ಸರ್ಕಾರವು, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ವ್ಯವಸ್ಥಾಪನಾ ಮಂಡಳಿಯಲ್ಲಿ ಕೇವಲ ಹದಿಮೂರು ಜನ ಸದಸ್ಯರುಗಳು ಇರುವುದಕ್ಕೆ ಸಂಬಂಧಿಸಿದ ಒಂದು ಮಾದರಿ ಅಧಿನಿಯಮವನ್ನು ಸರ್ಕ್ಯೂಲೇಟ್ ಮಾಡಿದೆ.

ಪ್ರಸ್ತುತ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರಲ್ಲಿ, ವ್ಯವಸ್ಥಾಪನಾ ಮಂಡಳಿಯು ಇಪ್ಪತ್ತೆರಡು ಸದಸ್ಯರುಗಳನ್ನು ಒಳಗೊಂಡಿದೆ. ಅಷ್ಟು ಭಾರಿ ಸಂಖ್ಯೆಯ ಸದಸ್ಯರುಗಳಿರುವುದು ಸುಗಮ ಮತ್ತು ತ್ವರಿತ ನಿರ್ಣಯಗಳನ್ನು ಕೈಗೊಳ್ಳುವುದಕ್ಕೆ ಅಡ್ಡಿಯಾಗುತ್ತದೆ.

ಆದ್ದರಿಂದ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರ 12ನೇ ಪ್ರಕರಣವನ್ನು ತಿದ್ದುಪಡಿ ಮಾಡುವ ಮೂಲಕ ವ್ಯವಸ್ಥಾಪನಾ ಮಂಡಳಿಯ ಸದಸ್ಯರ ಸಂಖ್ಯೆಯನ್ನು ಕಡಿಮೆ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕೃಷ್ಣ ಭೈರೇಗೌಡ**
ಕೃಷಿ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳ ಅಧಿನಿಯಮ, 2009ರ**
**(2010ರ ಕರ್ನಾಟಕ ಅಧಿನಿಯಮ 10) ಉದ್ಧೃತ ಭಾಗ**

xx xx xx

**12. ವ್ಯವಸ್ಥಾಪನಾ ಮಂಡಳಿ ಮತ್ತು ಅದರ ರಚನೆ.–** (1) ಕುಲಾಧಿಪತಿಯವರು ಅದಷ್ಟು ಬೇಗನೆ ವ್ಯವಸ್ಥಾಪನಾ ಮಂಡಳಿಯನ್ನು ರಚಿಸತಕ್ಕದ್ದು.

(2) ವ್ಯವಸ್ಥಾಪನಾ ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು:–

(i) ಕುಲಪತಿ – ಇವರು ಅಧ್ಯಕ್ಷರಾಗಿರತಕ್ಕದ್ದು;

(ii) ಕೃಷಿ ಇಲಾಖೆಯ ಪ್ರಭಾರವುಳ್ಳ ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು;

(iii) ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ಆರ್ಥಿಕ ಇಲಾಖೆ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iv) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು ಅರಣ್ಯ, ಪರಿಸರ ಮತ್ತು ಜೀವಿಪರಿಸರಶಾಸ್ತ್ರ ಇಲಾಖೆ ಅಥವಾ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(v) ತೋಟಗಾರಿಕೆ ಇಲಾಖೆಯ ಪ್ರಭಾರವುಳ್ಳ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಅಥವಾ ಕಾರ್ಯದರ್ಶಿಗಳು;

(vi) ರಾಜ್ಯ ಸರ್ಕಾರವು ನಾಮನಿರ್ದೇಶಿಸಿದ ವಿಶ್ವವಿದ್ಯಾಲಯದ ಪದವೀಧರರಾಗಿ ಐದು ವರ್ಷಗಳಿಂತ ಕಡಿಮೆ ಅವಧಿ ಆಗಿರದ ಪೈಕಿಯಿಂದ ಸರ್ಕಾರದ ನೌಕರರಲ್ಲದ ಅಥವಾ ವಿಶ್ವವಿದ್ಯಾಲಯದ ನೌಕರರಲ್ಲದ ಒಬ್ಬ ವ್ಯಕ್ತಿ;

(vii) ರಾಜ್ಯ ಸರ್ಕಾರದಿಂದ ನಾಮನಿರ್ದೇಶಿತರಾದ ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯಲ್ಲಿರುವ ಐವರು ಪ್ರಗತಿಪರ ರೈತರು ಇವರ ಪೈಕಿ ಇಬ್ಬರು ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು;

(viii) ಸಭಾಧ್ಯಕ್ಷರು ನಾಮನಿರ್ದೇಶನ ಮಾಡಿದ ಕರ್ನಾಟಕ ರಾಜ್ಯ ವಿಧಾನಸಭೆಯ ಇಬ್ಬರು ಸದಸ್ಯರು ಹಾಗೂ ಸಭಾಪತಿಯವರು ನಾಮನಿರ್ದೇಶನ ಮಾಡಿದ ಕರ್ನಾಟಕ ವಿಧಾನ ಪರಿಷತ್ತಿನ ಒಬ್ಬರು ಸದಸ್ಯರು;

(ix) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಕೃಷಿ ಮತ್ತು ಸಂಬಂಧಿಸಿದ ವಿಜ್ಞಾನಗಳ ಕ್ಷೇತ್ರದಿಂದ ವಿಶ್ವವಿದ್ಯಾಲಯದ ಅಧಿಕಾರ ಕ್ಷೇತ್ರ ವ್ಯಾಪ್ತಿಯ ಹೊರಗಿನವರಾದ ಪ್ರೊಫೆಸರ್ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಒಬ್ಬ ಪ್ರಖ್ಯಾತ ಶಿಕ್ಷಣ ತಜ್ಞರು;

(x) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಒಬ್ಬ ಕೃಷಿ ಉದ್ಯಮಿ;

(xi) ಕುಲಾಧಿಪತಿಯವರು ನಾಮನಿರ್ದೇಶನ ಮಾಡಿದ ಗ್ರಾಮೀಣಾಭಿವೃದ್ಧಿ ಕಾರ್ಯಕರ್ತರಾಗಿ ಹಿನ್ನೆಲೆಯುಳ್ಳ ಒಬ್ಬ ಮಹಿಳಾ ಸಮಾಜ ಸೇವಕರು;

(xii) ಭಾರತೀಯ ಕೃಷಿ ಸಂಶೋಧನಾ ಪರಿಷತ್ತಿನ ಮಹಾ ನಿರ್ದೇಶಕರು ನಾಮನಿರ್ದೇಶನ ಮಾಡಿದ ಆ ಸಂಸ್ಥೆಯ ಒಬ್ಬ ಪ್ರತಿನಿಧಿ;

(xiii) ವಿಶ್ವವಿದ್ಯಾಲಯದ ಶಿಕ್ಷಣ ನಿರ್ದೇಶಕರು;

(xiv) ಕೃಷಿ ಆಯುಕ್ತರು, ಕರ್ನಾಟಕ;

(xv) ಕುಲಪತಿಯವರು–ಸುತ್ತು ಸರದಿಯ ಮೇಲೆ ಎರಡು ವರ್ಷಗಳ ಅವಧಿಯವರೆಗೆ ನಾಮನಿರ್ದೇಶನ ಮಾಡಿದ ಒಬ್ಬ ಡೀನ್;

(xvi) ಕುಲಸಚಿವರು, ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

xx xx xx

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
## SECOND SESSION

### THE UNIVERSITIES OF AGRICULTURAL SCIENCES (AMENDMENT) BILL, 2013

**(L.A. Bill No. 23 of 2013)**

A Bill further to amend the Universities of Agricultural Sciences Act, 2009.

Whereas it is expedient further to amend the Universities of Agricultural Sciences Act, 2009 (Karnataka Act 10 of 2010) for the purposes hereinafter appearing;

Be it enacted by the Karnataka State Legislature in the sixty fourth year of the Republic of India, as follows:-

***1. Short title and commencement.-*** (1) This Act may be called the Karnataka Universities of Agricultural Sciences (Amendment) Act, 2013.

(2) It shall come into force at once.

***2. Amendment of section 12.-*** In the Universities of Agricultural Sciences Act, 2009 (Karnataka Act 10 of 2010), in section 12, for sub-section (2), the following shall be substituted, namely:-

"(2) The Board of Management shall consist of the following:-

| | | |
|---|---|---|
| (i) | The Vice-Chancellor of the University | - Chairman |
| (ii) | The Principal Secretary or Secretary to Government, Agriculture Department or their nominee not below the rank of Joint Secretary | - Member |
| (iii) | The Principal Secretary or Secretary to Government, Finance Department or their nominee not below the rank of Deputy Secretary | - Member |
| (iv) | The Principal Secretary or Secretary to Government, Horticulture Department or their nominee not below the rank of Joint Secretary | - Member |
| (v) | Three progressive farmers from the jurisdiction of the university of whom one person shall belong to the Scheduled Caste or the Scheduled Tribes to be nominated by the State Government | - Member |
| (vi) | One member of the Karnataka State Legislative Assembly nominated by the Speaker to each of the at Bangalore, Dharwad and Raichur University of Agriculture Sciences and One member of the Karnataka State Legislative Council nominated by the Chairman to the University of Agriculture and Horticultural Sciences at Shimoga | - Member |
| (vii) | One eminent educationist or expert in Agriculture sector to be nominated by the Chancellor | - Member |
| (viii) | One agro-industrialist or woman social worker to be nominated by the Chancellor | - Member |
| (ix) | One representative from the Indian Council of Agriculture Research to be nominated by the Director General | - Member |
| (x) | One Dean to be nominated by the Vice-Chancellor, by rotation for a term of two years | - Member |
| (xi) | Registrar of the University | - Member Secretary |

"

### STATEMENT OF OBJECTS AND REASONS

The Government of India have circulated a model Act relating to universities of Agriculture Sciences in which there are only thirteen members in the Board of Management.

Presently in the Universities of Agriculture Sciences Act, 2009 (Karnataka Act 10 of 2010) the Board of Management Consist of twenty two members. Such large number of members impedes smooth and quick decisions making.

Therefore it is considered necessary to reduce the number of members of the Board of Management by amending section 12 of the Universities of Agriculture Sciences Act, 2009.

Hence the Bill.

***FINANCIAL MEMORANDUM***

There is no extra expenditure involved in the legislative measure.

***KRISHNA BYREGOWDA***
State Minister for Agriculture

***P. OMPRAKASHA***
Secretary
Karnataka Legislative Assembly

***ANNEXURE***

***EXTRACT FROM THE UNIVERSITIES OF AGRICULTURAL SCIENCES ACT, 2009 (KARNATAKA ACT NO 10 OF 2010)***

XX XX XX

(2) The Board of Management shall consist of the following:

(i) The Vice-Chancellor who shall be the Chair person

(ii) The Principal Secretary or Secretary to Government of Karnataka incharge of the Agriculture Department;

(iii) The Principal Secretary or Secretary to Government of Karnataka, Finance Department or his nominee not below the rank of Deputy Secretary;

(iv) The Principal Secretary or Secretary to Government of Karnataka, Ecology, Environment and Forest Department or his nominee not below the rank of Deputy Secretary

(v) The Principal Secretary or Secretary to Government of Karnataka incharge of the Horticulture Department;

(vi) one person, not being a Government Servant or servant of the University nominated by State Government from among graduates of not less than five years standing of the University.

(vii) Five progressive farmers from the jurisdiction of the university of which two persons belonging to the Scheduled Caste or the Scheduled Tribes to be nominated by the State Government.

(viii) Two members of the Karnataka State Legislative Assembly to be nominated by the Speaker and one Member of the Karnataka Legislative Council to be nominated by the Chairman."

(ix) One eminent educationist not below the rank of professor from outside the jurisdiction of the university from the field of Agriculture and allied science to be nominated by the Chancellor.

(x) One agro-industrialist to be nominated by the Chancellor

(xi) One woman social worker having background of rural advancement to be nominated by the Chancellor.

(xii) One representative from the Indian Council of Agriculture Research to be nominated by the Director General.

(xiii) Director of Education of the University.

(xiv) Commissioner of Agriculture , Karnataka

(xv) One Dean to be nominated by the Vice-Chancellor, by rotation for a term of two years

(xvi) Registrar who shall be the Member Secretary

XX XX XX

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಡಿಸೆಂಬರ್ ೩, ೨೦೧೩ (ಮಾರ್ಗಶಿರ ೧೨, ಶಕ ವರ್ಷ ೧೯೩೫) | ನಂ. ೧೩೧೪ |
|---|---|---|
| **Part – IV-A** | **Bangalore, Tuesday, December 3, 2013 (Margashira 12, Shaka Varsha 1935)** | **No. 1314** |


***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/24/LA Bill/2013, Bangalore, Dated: 3-12-2013***

The following Bill was introduced in Legislative Assembly on 3-12-2013

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನ ಸಭೆ**
**ಎರಡನೇ ಅಧಿವೇಶನ**

## ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ (ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 24)**

ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ, 2011 ಅನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ, ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ, 2011 (2012ರ ಕರ್ನಾಟಕ ಅಧಿನಿಯಮ ಸಂಖ್ಯೆ 8)ನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ (ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ, 2011ರ (2012ರ ಕರ್ನಾಟಕ ಅಧಿನಿಯಮ ಸಂಖ್ಯೆ 8) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದಲ್ಲಿ,–

(i) (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) "ಪ್ರಾಧಿಕಾರ" ಎಂದರೆ 8ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸ್ ನೀಡಿಕೆ ಮತ್ತು ನಿಯಂತ್ರಣ ಪ್ರಾಧಿಕಾರ;"

(ii) (ಎಫ್) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎಫ್) "ಲೈಸೆನ್ಸಿಂಗ್ ಪ್ರಾಧಿಕಾರ" ಎಂದರೆ (ಬಿ) ಖಂಡದಲ್ಲಿ ಪರಿಭಾಷಿಸಲಾದ ಪ್ರಾಧಿಕಾರ;"

**3. 3ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 3ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದಲ್ಲಿ, "6ನೇ ಪ್ರಕರಣದ ಅಡಿಯಲ್ಲಿ ಸುರಕ್ಷಿತ ವಲಯ ಎಂದು ಘೋಷಣೆಯಾದ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಲೈಸೆನ್ಸಿಂಗ್ ಪ್ರಾಧಿಕಾರಕ್ಕೆ, ಈ ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸಿಗಾಗಿ" ಎಂಬ ಪದಗಳಿಗೆ "ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸ್‌ಗಾಗಿ, ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ (ತಿದ್ದುಪಡಿ) ಅಧಿನಿಯಮ, 2013 ಪ್ರಾರಂಭವಾದ ದಿನಾಂಕದಿಂದ ಮೂರು ತಿಂಗಳೊಳಗಾಗಿ, ಅಸ್ತಿತ್ವದಲ್ಲಿರುವ ಪ್ರದೇಶ ಅಥವಾ 6ನೇ ಪ್ರಕರಣದ ಅಡಿಯಲ್ಲಿ ಗೊತ್ತುಪಡಿಸಲಾದ ಷರತ್ತುಗಳಿಗೆ ಅನುಸಾರವಾಗಿರುವ ಯಾವುದೇ ಇತರ ಸೂಕ್ತವಾದ ಪ್ರದೇಶದ ಸಂಬಂಧದಲ್ಲಿ ಅದು 6ನೇ ಪ್ರಕರಣದ ಅಡಿಯಲ್ಲಿ ಗೊತ್ತುಪಡಿಸಲಾದ ಷರತ್ತುಗಳಿಗೆ ಅನುಸಾರವಾಗಿದೆಯೆಂಬ ಗೊತ್ತುಪಡಿಸಲಾದ ನಮೂನೆಯ ಘೋಷಣೆಯೊಂದಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) (2)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಘೋಷಣೆಯೊಂದಿಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕಗಳಿಗೆ, ಪ್ರಾಧಿಕಾರವು (4)ನೇ ಉಪಪ್ರಕರಣದ ಅಡಿಯಲ್ಲಿ ಸುರಕ್ಷಿತ ವಲಯ ಪಾಲನಾ ಪ್ರಮಾಣ ಪತ್ರವನ್ನು ನೀಡುವವರೆಗೆ ಅಥವಾ ನಿರಾಕರಿಸುವವರೆಗೆ ಅಥವಾ ಅರ್ಜಿಯ ದಿನಾಂಕದಿಂದ ಮೂರು ತಿಂಗಳುಗಳವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಕಾರ್ಯನಿರ್ವಹಿಸಲು ಅವಕಾಶ ನೀಡಬಹುದು."

(iii) (4)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) (2)ನೇ ಉಪಪ್ರಕರಣದ ಮೇರೆಗಿನ ಅರ್ಜಿಯನ್ನು ಅಥವಾ ಲೈಸೆನ್ಸಿನ ನವೀಕರಣಕ್ಕಾಗಿ ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಲೈಸೆನ್ಸ್ ನೀಡಿಕೆ ಪ್ರಾಧಿಕಾರವು, ಆ ಸ್ಥಳವನ್ನು, 6ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಜಂಟಿ ಪರಿಶೀಲನೆ ಮಾಡಿಸತಕ್ಕದ್ದು ಮತ್ತು ಸುರಕ್ಷಿತ ವಲಯ ಘೋಷಣೆ ಪಡೆಯತಕ್ಕದ್ದು, ಲೈಸೆನ್ಸ್ ನೀಡಿಕೆ ಪ್ರಾಧಿಕಾರವು ಅರ್ಜಿದಾರನಿಗೆ ಸುರಕ್ಷಿತ ವಲಯ ಪಾಲನಾ ಪ್ರಮಾಣಪತ್ರವನ್ನು ನೀಡತಕ್ಕದ್ದು. ಲೈಸೆನ್ಸ್ ನೀಡಿಕೆ ಪ್ರಾಧಿಕಾರವು ಆ ಘೋಷಣೆಯಲ್ಲಿ ನಿರ್ದಿಷ್ಟಪಡಿಸಲಾದ ಪ್ರದೇಶವನ್ನು ಸುರಕ್ಷಿತ ವಲಯವೆಂದು ಘೋಷಿಸಿಲ್ಲದಿದ್ದರೆ, ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ ಅರ್ಜಿಯನ್ನು ತಿರಸ್ಕರಿಸತಕ್ಕದ್ದು ಮತ್ತು ತದನುಸಾರವಾಗಿ ಅರ್ಜಿದಾರನಿಗೆ ತಿಳಿಸತಕ್ಕದ್ದು. ಆದಾಗ್ಯೂ, ಬದಲಿ ಸ್ಥಳಕ್ಕಾಗಿ ಹೊಸದಾಗಿ ಅರ್ಜಿ ಸಲ್ಲಿಸಲು ಅರ್ಜಿದಾರನು ಸ್ವತಂತ್ರನಾಗಿರುತ್ತಾನೆ:

ಮತ್ತೂ ಪರಂತು, ಅರ್ಜಿಯು ತಿರಸ್ಕೃತವಾದಲ್ಲಿ, ಅರ್ಜಿದಾರನು ಕಲ್ಲುಪುಡಿ ಮಾಡುವ ಘಟಕದ ಕಾರ್ಯಾಚರಣೆಯನ್ನು ಕೂಡಲೇ ನಿಲ್ಲಿಸತಕ್ಕದ್ದು ಮತ್ತು ಹೊಸದಾದ ಅರ್ಜಿಯನ್ನು ಲೈಸೆನ್ಸ್ ನೀಡಿಕೆ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(5) ಲೈಸೆನ್ಸಿಂಗ್ ಪ್ರಾಧಿಕಾರವು ಸುರಕ್ಷಿತ ವಲಯದ ಪಾಲನೆಯ ಪ್ರಮಾಣ ಪತ್ರವನ್ನು ನೀಡಿದರೆ, ಅರ್ಜಿದಾರನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯನ್ನು ಸಂಪರ್ಕಿಸಿ ಕಾರ್ಯಾಚರಣೆ ಅನುಮತಿ ಪ್ರಮಾಣ ಪತ್ರವನ್ನು (CFO) ಪಡೆದುಕೊಳ್ಳತಕ್ಕದ್ದು ಮತ್ತು ಲೈಸೆನ್ಸು ನೀಡಿಕೆ ಪ್ರಾಧಿಕಾರಕ್ಕೆ ಅದನ್ನು ಸಲ್ಲಿಸತಕ್ಕದ್ದು.

(6) ಲೈಸೆನ್ಸಿಂಗ್ ಪ್ರಾಧಿಕಾರವು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪಡೆದಿರುವ ಕಾರ್ಯಾಚರಣೆ ಅನುಮತಿ ಪ್ರಮಾಣ ಪತ್ರವನ್ನು (CFO) ಹಾಜರುಪಡಿಸಿದ ನಂತರ, 6ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಷರತ್ತುಗಳ ಪಾಲನೆಗೆ ಒಳಪಟ್ಟು, ಲೈಸೆನ್ಸನ್ನು ನೀಡತಕ್ಕದ್ದು.

(7) ಕಲ್ಲುಪುಡಿ ಮಾಡುವ ಅಸ್ತಿತ್ವದಲ್ಲಿರುವ ಘಟಕವನ್ನು ಹೊಂದಿರುವ ವ್ಯಕ್ತಿಯು ಪ್ರಸಕ್ತ ಕಾರ್ಯನಿರ್ವಹಿಸುತ್ತಿರುವ ಸ್ಥಳಕ್ಕಿಂತ ಬೇರೆಯದಾದ, ಲೈಸೆನ್ಸಿಂಗ್ ಪ್ರಾಧಿಕಾರವು ಸುರಕ್ಷಿತ ವಲಯವೆಂದು ಪ್ರಮಾಣೀಕರಿಸಿರುವ ಇತರ ಯಾವುದೇ ಸ್ಥಳವನ್ನು ಪಡೆದರೆ, ಅಂಥ ಕಲ್ಲುಪುಡಿ ಮಾಡುವ ಘಟಕವನ್ನು, (4)ನೇ ಉಪಪ್ರಕರಣದ ಅಡಿಯಲ್ಲಿ ಸುರಕ್ಷಿತ ವಲಯದ ಪಾಲನಾ ಪ್ರಮಾಣ ಪತ್ರವನ್ನು ನೀಡಿದ ದಿನಾಂಕದಿಂದ ಒಂದು ವರ್ಷದೊಳಗೆ ಹಾಗೆ ಪ್ರಮಾಣೀಕರಿಸಲಾದ ಸುರಕ್ಷತಾ ವಲಯಕ್ಕೆ ಸ್ಥಳಾಂತರಿಸತಕ್ಕದ್ದು."

**4. 4ನೇ ಪ್ರಕರಣದ ತಿದ್ದುಪಡಿ.–** (1) ಮೂಲ ಅಧಿನಿಯಮದ 4ನೇ ಪ್ರಕರಣದಲ್ಲಿ,

(i) (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಲೈಸೆನ್ಸ್ ನೀಡಿಕೆಗಾಗಿ ಅಥವಾ ನವೀಕರಣಕ್ಕಾಗಿ ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ನಂತರ, ಲೈಸೆನ್ಸಿಂಗ್ ಪ್ರಾಧಿಕಾರವು, 6ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಆ ಸ್ಥಳದ ಜಂಟಿ ಪರಿಶೀಲನೆ ಮಾಡಿಸತಕ್ಕದ್ದು. ಸುರಕ್ಷಿತ ವಲಯದ ಘೋಷಣೆಯ ತರುವಾಯ ಲೈಸೆನ್ಸಿಂಗ್ ಪ್ರಾಧಿಕಾರವು, ಸುರಕ್ಷಿತ ವಲಯ ಒಪ್ಪಿಗೆ ಪ್ರಮಾಣ ಪತ್ರವನ್ನು ಅರ್ಜಿದಾರನಿಗೆ ನೀಡತಕ್ಕದ್ದು. ಲೈಸೆನ್ಸಿಂಗ್ ಪ್ರಾಧಿಕಾರವು, ಅರ್ಜಿಯಲ್ಲಿ ಪ್ರಸ್ತಾಪಿಸಿರುವ ಪ್ರದೇಶವನ್ನು ಸುರಕ್ಷಿತ ವಲಯವೆಂದು ಘೋಷಿಸಿಲ್ಲದಿದ್ದರೆ, ಕಾರಣಗಳನ್ನು ಲಿಖಿತದಲ್ಲಿ ದಾಖಲಿಸಿ ಅರ್ಜಿಯನ್ನು ತಿರಸ್ಕರಿಸತಕ್ಕದ್ದು ಮತ್ತು ಅದಕ್ಕಾನುಸಾರವಾಗಿ ಅರ್ಜಿದಾರನಿಗೆ ತಿಳಿಸತಕ್ಕದ್ದು. ಆದಾಗ್ಯೂ, ಅರ್ಜಿದಾರನು ಬದಲಿ ಸ್ಥಳಕ್ಕಾಗಿ ಹೊಸ ಅರ್ಜಿಯನ್ನು ಸಲ್ಲಿಸಲು ಸ್ವತಂತ್ರನಾಗಿರತಕ್ಕದ್ದು.

(3) ಲೈಸೆನ್ಸಿಂಗ್ ಪ್ರಾಧಿಕಾರವು ಸುರಕ್ಷಿತ ವಲಯ ಒಪ್ಪಿಗೆ ಪ್ರಮಾಣ ಪತ್ರವನ್ನು ನೀಡಿದರೆ ಅರ್ಜಿದಾರನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಲಿಯನ್ನು ಸಂಪರ್ಕಿಸತಕ್ಕದ್ದು ಮತ್ತು ಕಾರ್ಯಾಚರಣೆಯ ಅನುಮತಿ ಪ್ರಮಾಣ ಪತ್ರವನ್ನು (CFO) ಪಡೆದುಕೊಳ್ಳತಕ್ಕದ್ದು ಹಾಗೂ ಅದನ್ನು ಲೈಸೆನ್ಸಿಂಗ್ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು."

**5. 5ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ "ಮೂರು ವರ್ಷಗಳು" ಎಂಬ ಪದಗಳು ಬರುವ ಎರಡು ಕಡೆಗಳಲ್ಲಿ, ಅವುಗಳಿಗೆ "ಐದು ವರ್ಷಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**6. ಸುರಕ್ಷಿತ ವಲಯವೆಂದು ಘೋಷಿಸುವುದಕ್ಕೆ ಷರತ್ತುಗಳು.–** ಈ ಅಧಿನಿಯಮದ ಅಡಿಯಲ್ಲಿ ಕಲ್ಲುಪುಡಿ ಮಾಡುವ ಘಟಕಗಳಿಗಾಗಿ ಸುರಕ್ಷಿತ ವಲಯದ ಘೋಷಣೆಯು, ಈ ಮುಂದಿನ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು, ಎಂದರೆ:–

(1) ಸುರಕ್ಷಿತ ವಲಯವು,–

(ಎ) ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳಿಂದ (ರಸ್ತೆಗಳ ಮಧ್ಯದ ಗೆರೆಯಿಂದ) ಒಂದು ನೂರು ಮೀಟರುಗಳೊಳಗೆ;

(ಬಿ) ಪ್ರಧಾನ ಜಿಲ್ಲಾ ರಸ್ತೆಗಳು ಅಥವಾ ಇತರ ರಸ್ತೆಗಳಿಂದ ಐವತ್ತು ಮೀಟರುಗಳೊಳಗೆ;

(ಸಿ) ಕಂದಾಯ ಗ್ರಾಮಗಳು, ದೇವಾಲಯಗಳು, ಶಾಲೆಗಳಿಂದ ಐದು ನೂರು ಮೀಟರುಗಳೊಳಗೆ;

(ಡಿ) ಮುನಿಸಿಪಲ್ ಕಾರ್ಪೊರೇಷನ್‌ಗಳ, ಸಿಟಿ ಮುನಿಸಿಪಲ್ ಕಾರ್ಪೊರೇಷನ್, ಟೌನ್ ಮುನಿಸಿಪಲ್ ಕೌನ್ಸಿಲ್‌ಗಳ ಸರಹದ್ದುಗಳೊಳಗೆ;

– ಇರತಕ್ಕದ್ದಲ್ಲ.

(2) ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವು ಕನಿಷ್ಠ ಒಂದು ಎಕರೆ ಭೂಮಿಯಲ್ಲಿ ಇರತಕ್ಕದ್ದು.

(3) ಲೈಸೆನ್ಸ್ ನೀಡಿಕೆ ಪ್ರಾಧಿಕಾರವು, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗೆ, ಗಣಿ ಮತ್ತು ಭೂ ವಿಜ್ಞಾನ, ಕಂದಾಯ, ಅರಣ್ಯ ಇಲಾಖೆಯ ಸಂಬಂಧಪಟ್ಟ ಅಧಿಕಾರಿಗಳಿಂದ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಪರಿಸರ ಅಧಿಕಾರಿಯಿಂದ ಜಂಟಿ ಪರಿಶೀಲನೆ ಮಾಡಿಸುವ ಮೂಲಕ ಮೇಲಿನ ಷರತ್ತುಗಳ ಪಾಲನೆಯ ಬಗ್ಗೆ ಪರಿಶೀಲನೆ ಮಾಡತಕ್ಕದ್ದು ಮತ್ತು ತಮ್ಮ ಅಧಿಕಾರ ವ್ಯಾಪ್ತಿಯೊಳಗೆ ಪ್ರದೇಶ ಮತ್ತು ಅದರ ವ್ಯಾಪ್ತಿಗಳನ್ನು ನಿರ್ದಿಷ್ಟಪಡಿಸಿ, ಅಧಿಸೂಚನೆಯ ಮೂಲಕ, ಸುರಕ್ಷಿತ ವಲಯವನ್ನು ಘೋಷಿಸತಕ್ಕದ್ದು:

ಪರಂತು, ಲೈಸೆನ್ಸಿಂಗ್ ಪ್ರಾಧಿಕಾರವು, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ, ಆದರೆ ಯಾವ ಸಂದರ್ಭದಲ್ಲೂ ಮೂರು ತಿಂಗಳಿಗಿಂತ ಹೆಚ್ಚು ವಿಳಂಬವಾಗದಂತೆ ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕಕ್ಕಾಗಿ ಸುರಕ್ಷಿತ ವಲಯವನ್ನು ಘೋಷಿಸತಕ್ಕದ್ದು.

**6ಎ. ಲೈಸೆನ್ಸನ್ನು ನೀಡುವುದಕ್ಕಾಗಿ ಷರತ್ತುಗಳು.–** (1) ಸುರಕ್ಷಿತ ವಲಯದಿಂದಾಚೆಗೆ ಕಲ್ಲುಪುಡಿ ಮಾಡುವ ಘಟಕಗಳಿಗೆ ಯಾವುದೇ ಲೈಸೆನ್ಸನ್ನು ನೀಡತಕ್ಕದ್ದಲ್ಲ.

(2) ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ನೀಡಿರುವ ಕಾರ್ಯಾಚರಣೆಯ ಅನುಮತಿ ಪ್ರಮಾಣಪತ್ರವನ್ನು (Consent for Operation Certificate - CFO) ಹಾಜರುಪಡಿಸಿದ ಮೇಲೆ, ಲೈಸೆನ್ಸಿಂಗ್ ಪ್ರಾಧಿಕಾರವು ನಿಯಮಿಸಬಹುದಾದಂಥ ನಮೂನೆಯಲ್ಲಿ ಅರ್ಜಿದಾರನಿಗೆ ಲೈಸೆನ್ಸನ್ನು ನೀಡತಕ್ಕದ್ದು. ಲೈಸೆನ್ಸುದಾರನು ಈ ಮುಂದಿನ ಷರತ್ತುಗಳಿಗೆ ಬದ್ಧನಾಗಿರತಕ್ಕದ್ದು, ಎಂದರೆ:–

(1) ಪ್ರತಿಯೊಂದು ಘಟಕವು, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯು ಕಾಲಕಾಲಕ್ಕೆ ನಿಗದಿಪಡಿಸಬಹುದಾದಂತೆ ವಾಯು (ಮಾಲಿನ್ಯ ಪ್ರತಿಬಂಧ ಮತ್ತು ನಿಯಂತ್ರಣ) ಅಧಿನಿಯಮ, 1981 ಮತ್ತು ಪರಿಸರ ಸಂರಕ್ಷಣೆ ಅಧಿನಿಯಮ, 1986 ಮತ್ತು ಅದರಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳಿಗೆ ಬದ್ಧವಾಗಿರತಕ್ಕದ್ದು;

(2) ಪ್ರತಿಯೊಂದು ಘಟಕವು ಶಬ್ದ (ವಿನಿಯಮಗಳು ಮತ್ತು ನಿಯಂತ್ರಣ) ನಿಯಮಗಳು, 2000 ಇದಕ್ಕೆ ಅನುಸಾರವಾಗಿರತಕ್ಕದ್ದು;

(3) ಕಲ್ಲುಪುಡಿ ಮಾಡುವ ಒಂದು ಘಟಕವು (ಕ್ರಷರ್) ಅಥವಾ ಘಟಕಗಳ ಸಮೂಹವು ವಾಯು ಮಾಲಿನ್ಯ ನಿಯಂತ್ರಣ ಕ್ರಮಗಳ ಜೊತೆಗೆ, (ಸಂದರ್ಭಾನುಸಾರ, ರಾಷ್ಟ್ರೀಯ ಹೆದ್ದಾರಿ ಅಥವಾ ರಾಜ್ಯ ಹೆದ್ದಾರಿ ಅಥವಾ ಪ್ರಧಾನ ಜಿಲ್ಲಾ ರಸ್ತೆ ಅಥವಾ ಗ್ರಾಮ ವಸತಿ ಪ್ರದೇಶ ಅಥವಾ ದೇವಾಲಯ ಅಥವಾ ಶಾಲೆಗೆ ಸಮಾನಾಂತರವಾಗಿ) ಎಲ್ಲಾ ಮೂರು ಕಡೆಗಳಲ್ಲಿ 15 ರಿಂದ 20 ಅಡಿ ಎತ್ತರದ ಗೋಡೆ/ ಜಿಐ ಶೀಟ್ ರಕ್ಷಣೆ ಒದಗಿಸತಕ್ಕದ್ದು.

(4) ಅರ್ಜಿದಾರನು,–

(ಎ) ಆ ಸ್ಥಳದಿಂದ ಧೂಳು ಹೊರಕ್ಕೆ ಹೋಗದಂತೆ ತಡೆಗಟ್ಟಲು ದೊಡ್ಡ ಪ್ರಮಾಣದಲ್ಲಿ ಧೂಳು ಹೊರ ಹಾಕುವ ಮೂಲಗಳಿಗೆ ಕಟ್ಟಡ ಆವರಣಗಳನ್ನು ನಿರ್ಮಿಸುವಂಥ ಅವಶ್ಯವಾದ ಧೂಳು ತಡೆ ವ್ಯವಸ್ಥೆಯನ್ನು ಅಳವಡಿಸಿಕೊಳ್ಳತಕ್ಕದ್ದು;

(ಬಿ) ಬಿರುಸಾಗಿ ಬೀಸುವ ಗಾಳಿಯನ್ನು ತಡೆದುಕೊಳ್ಳುವಂಥ ಆಂಗಲ್ ಸ್ಟ್ರಕ್ಚರ್‌ಗಳ ಆಸರೆಯ ಹಂದರವಿರುವ ಜಿ.ಐ.ಶೀಟುಗಳ (1.66ಮಿಮೀ ಮತ್ತು 1.25ಮಿ.ಮೀ ದಪ್ಪದ) ಜಿ.ಐ.ಶೀಟ್‌ಗಳ ಆವರಣ ಬೇಲಿಯನ್ನು (enclosures) ನಿರ್ಮಿಸತಕ್ಕದ್ದು;

(ಸಿ) ನೀರು ಸಂಗ್ರಹವಾಗುವುದನ್ನು ತಡೆಗಟ್ಟುವ ಹಾಗೆ ಇಳಿಜಾರು ಛಾವಣಿ ಅನುಕ್ರಮವಾಗಿ ನಿರ್ಮಿಸತಕ್ಕದ್ದು;

(ಡಿ) ಪರಿಸರಕ್ಕೆ ಧೂಳು ಬಿಡುಗಡೆಯಾಗುವುದನ್ನು ತಡೆಗಟ್ಟಲು ಪೂರ್ತಿಯಾಗಿ ಮುಚ್ಚುವಂಥ ಹಾಪರ್ ಬಾಟಂ/ಉತ್ಪನ್ನವನ್ನು ಇಳಿಸುವ ಕನ್ವೇಯರ್‌ನಂಥ ಸಾಮಗ್ರಿ ವರ್ಗಾವಣೆ ತಾಣವನ್ನು ವ್ಯವಸ್ಥೆಗೊಳಿಸತಕ್ಕದ್ದು;

(ಇ) ಜಾ ಕ್ರಷರುಗಳ ಪಕ್ಕದಲ್ಲಿ ಮತ್ತು ತಳಭಾಗದಲ್ಲಿ ತೆರೆದಿರುವ ಭಾಗಗಳಲ್ಲಿ ಪೂರ್ಣವಾಗಿ ಮುಚ್ಚುವಂಥ ಆವರಣ ಬೇಲಿ ನಿರ್ಮಿಸಲು ಸಾಧ್ಯವಿಲ್ಲದಿದ್ದಲ್ಲಿ, ಪರಿಸರಕ್ಕೆ ಧೂಳು ಬಿಡುಗಡೆಯಾಗುವುದನ್ನು ತಡೆಗಟ್ಟಲು ಅವುಗಳಿಗೆ ಜಿಐ ಷೀಟ್‌ಗಳು/ರಬ್ಬರ್ ಫ್ಲಾಪ್ ಅಥವಾ ಯಾವುದೇ ಇತರ ಸಾಮಗ್ರಿಯಿಂದ ಸೂಕ್ತವಾಗಿ ಮುಚ್ಚುವ ವ್ಯವಸ್ಥೆ ಮಾಡಲಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು;

(ಎಫ್) ಎತ್ತರದಿಂದ ವಸ್ತುಗಳು ಅಡೆತಡೆಯಿಲ್ಲದೆ ಬೀಳುವಾಗ ಪರಿಸರದೊಳಗೆ ಧೂಳು ಬಿಡುಗಡೆಯಾಗುವುದನ್ನು ತಡೆಗಟ್ಟಲು ಉತ್ಪನ್ನವನ್ನು ಇಳಿಸುವ ಕನ್ವೇಯರ್‌ಗಳಲ್ಲಿ ಟೆಲಿಸ್ಕೋಪಿಕ್ ಚ್ಯೂಟ್‌ಗಳನ್ನು ಅಳವಡಿಸಲಾಗಿದೆಯೆಂದು ಖಚಿತಪಡಿಸಿಕೊಳ್ಳತಕ್ಕದ್ದು. ರಾಶಿಯ ಗಾತ್ರಕ್ಕೆ ಅನುಗುಣವಾಗಿ ಈ ಚ್ಯೂಟ್‌ಗಳನ್ನು ಉದ್ದದಲ್ಲಿ ಸರಿಹೊಂದಿಸಿಕೊಳ್ಳಬಹುದು;

(ಜಿ) ಧೂಳಿನ ಬಿಡುಗಡೆಯನ್ನು ತಡೆಗಟ್ಟಲು, ರಬ್ಬರ್ ಫ್ಲಾಪ್‌ನೊಂದಿಗೆ (ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ) ಶಾಫ್ಟರ್ ಮೋಟಾರು ಡ್ರೈವರ್ ಕನ್ವೆಯರ್ ಬೆಲ್ಟ್‌ಗಳ ಮೇಲೆ, ಮುಂತಾದ ಕಡೆಗಳಲ್ಲಿ ಆವರಣ ಬೇಲಿಯಲ್ಲಿ ತೆರೆದ ಕಿಂಡಿಗಳನ್ನು ಏರ್ಪಡಿಸತಕ್ಕದ್ದು;

(ಎಚ್) ಧೂಳಿನ ಮೋಡವನ್ನು ನಿವಾರಿಸಲು, ಧೂಳು ಉತ್ಪಾದನೆಯಾಗುವ ಮೂಲಗಳ ಮೇಲೆ, ವಿಶೇಷ ನಳಿಕೆಗಳ ಮೂಲಕ ಸಣ್ಣದಾಗಿ ನೀರಿನ ತುಂತುರು ಹನಿಗಳನ್ನು ಸಿಂಪಡಿಸುವುದನ್ನು ಒಳಗೊಂಡಂತೆ ಪರಿಣಾಮಕಾರಿ ಧೂಳು ನಿವಾರಣಾ ವ್ಯವಸ್ಥೆಯನ್ನು ಕಲ್ಪಿಸತಕ್ಕದ್ದು;

(ಐ) ನೀರು ಸಿಂಪರಣೆ ನಳಿಕೆಯ ಕಟ್ಟಿಕೊಳ್ಳುವುದನ್ನು ತಡೆಗಟ್ಟಲು ಅದನ್ನು ಕಾಲಕಾಲಕ್ಕೆ ಶುಚಿಗೊಳಿಸತಕ್ಕದ್ದು;

(ಜೆ) ವೃತ್ತಿ ಸುರಕ್ಷತಾ ಕ್ರಮವಾಗಿ, ಎಲ್ಲಾ ಕೆಲಸಗಾರರಿಗೆ ಮೂಗು ಮುಚ್ಚಿಕೊಳ್ಳುವಂಥ ಮುಸುಕನ್ನು ಒದಗಿಸತಕ್ಕದ್ದು.

(5) ಧೂಳಿನ ಕಣಗಳು ಹರಡುವುದನ್ನು ತಡೆಗಟ್ಟಲು ಬೇವು, ಹುಣಸೆ, ಗೋಲ್ಡ್ ಮೊಹರ್, ಮುತ್ತುಗದ ಮರ, ಮುಂತಾದ ಯಾವುದೇ ಇತರ ಸ್ಥಳೀಯ ತಳಿಯ ದಟ್ಟವಾದ ಎಲೆಗಳುಳ್ಳ ನಿತ್ಯಹರಿದ್ವರ್ಣ ಮರಗಳನ್ನು ಒಳಗೊಂಡ ಸಮರ್ಪಕ ಹಸಿರು ವಲಯವನ್ನು ಎಲ್ಲಾ ಕಲ್ಲುಪುಡಿ ಮಾಡುವ ಘಟಕಗಳು (ಕ್ರಷರ್‌ಗಳು) ಬೆಳೆಸತಕ್ಕದ್ದು."

**7. 8ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 8ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**8. ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸ್ ನೀಡಿಕೆ ಮತ್ತು ನಿಯಂತ್ರಣ ಪ್ರಾಧಿಕಾರದ ಸ್ಥಾಪನೆ.–** (1) ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) (ತಿದ್ದುಪಡಿ) ಅಧಿನಿಯಮ, 2013ರ ಪ್ರಾರಂಭದ ದಿನಾಂಕದಂದು ಮತ್ತು ಅಂದಿನಿಂದ, ಪ್ರತಿಯೊಂದು ಕಂದಾಯ ಜಿಲ್ಲೆಯಲ್ಲಿ, ಈ

ಮುಂದಿನ ಸದಸ್ಯರನ್ನು ಒಳಗೊಂಡಿರುವ ಒಂದು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸನ್ಸ್ ನೀಡಿಕೆ ಮತ್ತು ನಿಯಂತ್ರಣ ಪ್ರಾಧಿಕಾರವನ್ನು ಸ್ಥಾಪಿಸತಕ್ಕದ್ದು, ಎಂದರೆ:–

(ಎ) ಜಿಲ್ಲೆಯ ಜಿಲ್ಲಾಧಿಕಾರಿ . . . . ಅಧ್ಯಕ್ಷರು

(ಬಿ) ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ . . . . ಪದನಿಮಿತ್ತ ಸದಸ್ಯರು

(ಸಿ) ಜಿಲ್ಲೆಯ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ . . . . ಪದನಿಮಿತ್ತ ಸದಸ್ಯರು

(ಡಿ) ಸಂಬಂಧಪಟ್ಟ ಅಧಿಕಾರ ವ್ಯಾಪ್ತಿ ಪ್ರದೇಶದ ಉಪ ಅರಣ್ಯ ಸಂರಕ್ಷಣಾಧಿಕಾರಿ . . . . ಪದನಿಮಿತ್ತ ಸದಸ್ಯರು

(ಇ) ಜಿಲ್ಲೆಯ ಎಲ್ಲಾ ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ . . . . ಪದನಿಮಿತ್ತ ಸದಸ್ಯರು

(ಎಫ್) ಪರಿಸರ ಅಧಿಕಾರಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ . . . . ಪದನಿಮಿತ್ತ ಸದಸ್ಯರು

(ಜಿ) ಉಪ ನಿರ್ದೇಶಕರು/ಹಿರಿಯ ಭೂ ವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ ... ಸದಸ್ಯ–ಕಾರ್ಯದರ್ಶಿ

(2) ಲೈಸೆನ್ಸಿನ ಮಂಜೂರಾತಿಗಾಗಿ ಸಲ್ಲಿಸುವ ಎಲ್ಲಾ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಯು ಸ್ವೀಕರಿಸತಕ್ಕದ್ದು ಮತ್ತು ತೀರ್ಮಾನಕ್ಕಾಗಿ ಅದನ್ನು ಪ್ರಾಧಿಕಾರದ ಮುಂದೆ ಇಡತಕ್ಕದ್ದು.

(3) ಪ್ರಾಧಿಕಾರದ ಕಾರ್ಯಕಲಾಪ ನಿರ್ವಹಣೆಯ ಕಾರ್ಯವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು."

**8. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**9. ಪ್ರಾಧಿಕಾರದ ಕರ್ತವ್ಯಗಳು.–** (1) ಪ್ರಾಧಿಕಾರವು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು ಮತ್ತು ಸದಸ್ಯ ಕಾರ್ಯದರ್ಶಿಯು ಸಭೆಯನ್ನು ಕರೆಯತಕ್ಕದ್ದು. ಯಾವುದೇ ಕಾರಣಕ್ಕಾಗಿ ಅವಶ್ಯವಿದ್ದರೆ, ಸದಸ್ಯ ಕಾರ್ಯದರ್ಶಿಯು, ಅಧ್ಯಕ್ಷರ ಅನುಮೋದನೆ ಪಡೆದು ಯಾವುದೇ ಸಮಯದಲ್ಲಿ ಸಭೆಯನ್ನು ಕರೆಯಬಹುದು. ಒಟ್ಟು ಸದಸ್ಯರ ಮೂರನೇ ಒಂದರಷ್ಟು ಸದಸ್ಯರು ಸಭೆಯ ಕೋರಂ ಆಗಿರತಕ್ಕದ್ದು.

(2) ಈ ಮುಂದಿನವು ಪ್ರಾಧಿಕಾರದ ಕರ್ತವ್ಯಗಳಾಗಿರತಕ್ಕದ್ದು,–

(i) ಸುರಕ್ಷಿತ ವಲಯವನ್ನು ಘೋಷಿಸುವುದಕ್ಕಾಗಿ ಗೊತ್ತುಪಡಿಸಿದ ಷರತ್ತುಗಳ ಪಾಲನೆ ಬಗ್ಗೆ ಪರಿಶೀಲನೆ ಮಾಡಲು ಗಣಿ ಮತ್ತು ಭೂವಿಜ್ಞಾನ, ಕಂದಾಯ, ಅರಣ್ಯ ಇಲಾಖೆಗಳು ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಸಂಬಂಧಪಟ್ಟ ಅಧಿಕಾರಿಗಳಿಂದ ಕಲ್ಲುಪುಡಿ ಮಾಡುವ ಘಟಕಗಳ ಜಂಟಿ ತಪಾಸಣೆ ಮಾಡಿಸುವುದು ಮತ್ತು ವರದಿಯನ್ನು ಪಡೆಯುವುದು;

(ii) ಗುಣಮಟ್ಟಗಳಿಗೆ ಅನುಸಾರವಾಗಿರುವಂಥವುಗಳನ್ನು ಸುರಕ್ಷಿತ ವಲಯವೆಂದು ಘೋಷಿಸುವುದು;

(iii) ಘೋಷಿತ ಸುರಕ್ಷಿತ ವಲಯದಲ್ಲಿ ಕಲ್ಲುಪುಡಿ ಮಾಡುವ ಘಟಕಗಳನ್ನು ಹೊಂದಿರುವ ಅರ್ಜಿದಾರರಿಗೆ ನಿಯಮಿಸಬಹುದಾದಂಥ ನಮೂನೆಯಲ್ಲಿ ಸುರಕ್ಷಿತ ವಲಯ ಪಾಲನಾ ಪ್ರಮಾಣಪತ್ರವನ್ನು ನೀಡುವುದು;

(iv) ನಿಯಮಿಸಬಹುದಾದಂಥ ನಮೂನೆಯಲ್ಲಿ ಲೈಸೆನ್ಸನ್ನು ನೀಡುವುದು;

(v) ಲೈಸೆನ್ಸ್ ಇರುವ ಆವರಣಗಳನ್ನು ಮೇಲ್ವಿಚಾರಣೆ ಮಾಡುವುದು ಮತ್ತು ಯಾವುದೇ ಉಲ್ಲಂಘನೆಯ ಬಗ್ಗೆ ಅಧ್ಯಕ್ಷರಿಗೆ ವರದಿ ಮಾಡುವುದು;

(vi) ಷರತ್ತುಗಳನ್ನು ಪಾಲಿಸದಿರುವುದಕ್ಕಾಗಿ ಲೈಸೆನ್ಸನ್ನು ಅಮಾನತುಗೊಳಿಸುವುದು/ ರದ್ದುಗೊಳಿಸುವುದು;

(vii) ನಷ್ಟ ಪರಿಹಾರವನ್ನು ಲೆಕ್ಕ ಹಾಕುವುದು, ತಾಂತ್ರಿಕ ಸಲಹೆಯನ್ನು ನೀಡುವುದು ಮುಂತಾದ ಯಾವುದೇ ನಿರ್ದಿಷ್ಟ ವಿಷಯಗಳ ಬಗ್ಗೆ ಪ್ರಾಧಿಕಾರಕ್ಕೆ ನೆರವು ನೀಡಲು ಸರ್ಕಾರದ ಯಾವುದೇ ಇತರ ಇಲಾಖೆಗಳ ಯಾರೇ ಅಧಿಕಾರಿಗಳನ್ನು ಆಹ್ವಾನಿಸುವುದು;

(viii) ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಆದೇಶಗಳು ಮತ್ತು ಮಾರ್ಗಸೂಚಿಗಳನ್ನು ಅನುಸರಿಸುವುದು;

(ix) ಕನಿಷ್ಠ ಪಕ್ಷ ವರ್ಷಕ್ಕೊಮ್ಮೆಯಾದರೂ ನಿಯತಕಾಲಿಕವಾಗಿ ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವನ್ನು ತಪಾಸಣೆ ಮಾಡುವುದು ಅಥವಾ ತಪಾಸಣೆ ಮಾಡಲು ಒಬ್ಬ ಅಧಿಕಾರಿಯನ್ನು ಅಧಿಕೃತಗೊಳಿಸುವುದು."

**9. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**12. ಬಾಧಿತರಿಗೆ ನೀಡಲಾಗುವ ಪರಿಹಾರ ನಿಧಿ.–** (1) ಪ್ರಾಧಿಕಾರವು, ಬಾಧಿತರಿಗೆ ನೀಡಲಾಗುವ ಪರಿಹಾರ ನಿಧಿ ಎಂದು ಕರೆಯಲಾಗುವ ಒಂದು ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ವಿಧಿಸಿದ ಅರ್ಜಿ ಶುಲ್ಕ, ಲೈಸೆನ್ಸ್ ಶುಲ್ಕಗಳು, ಜುಲ್ಮಾನೆಗಳು ಮತ್ತು ದಂಡಗಳ ಮುಖಾಂತರ ತಾನು ಸ್ವೀಕರಿಸಿದ ಎಲ್ಲಾ ಹಣವನ್ನು ಅದಕ್ಕೆ ಜಮೆ ಮಾಡತಕ್ಕದ್ದು. ಅದನ್ನು, ನಿಯಮಿಸಬಹುದಾದ ನಿಯಮಗಳಿಗನುಸಾರವಾಗಿ ವಿನಿಯೋಗಿಸತಕ್ಕದ್ದು ಮತ್ತು ವಿತರಿಸತಕ್ಕದ್ದು.

(2) ಪ್ರಾಧಿಕಾರದ ಅಧ್ಯಕ್ಷ ಮತ್ತು ಸದಸ್ಯ ಕಾರ್ಯದರ್ಶಿಯು, ನಿಯಮಿಸಬಹುದಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ಬಾಧಿತರಿಗೆ ನೀಡಲಾಗುವ ಪರಿಹಾರ ನಿಧಿಯನ್ನು, ಜಂಟಿಯಾಗಿ ನಿರ್ವಹಿಸತಕ್ಕದ್ದು.

(3) ಬಾಧಿತರಿಗೆ ನೀಡಲಾಗುವ ಪರಿಹಾರ ನಿಧಿಯನ್ನು, ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ನಿಯಮಿಸಬಹುದಾದ ರೀತಿಯಲ್ಲಿ ಇಡತಕ್ಕದ್ದು

(4) ಪ್ರಾಧಿಕಾರವು, ಕಲ್ಲು ಪುಡಿ ಮಾಡುವ ಘಟಕಗಳಿಂದ ಆರೋಗ್ಯದ ತೊಂದರೆಗಳು ಉಂಟಾದ ಕಾರಣದ ಮೇಲೆ, ಆರೋಗ್ಯದ ತೊಂದರೆ ಉಂಟಾದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗೆ ಬಾಧಿತರಾದವರಿಂದ ದೂರುಗಳು ಅಥವಾ ಅರ್ಜಿಗಳು ಅಥವಾ ಕ್ಲೇಮನ್ನು ಸ್ವೀಕರಿಸತಕ್ಕದ್ದು ಮತ್ತು ಅಂಥ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗೆ ಬಾಧಿತರಿಗೆ ಅಥವಾ ಅವರ ಕಾನೂನುಬದ್ಧ ಪ್ರತಿನಿಧಿಗಳಿಗೆ

ನೀಡಬೇಕಾದ ಪರಿಹಾರವನ್ನು ಅಥವಾ ನಷ್ಟ ಪರಿಹಾರದ ಮೊತ್ತವನ್ನು ನಿರ್ಧರಿಸತಕ್ಕದ್ದು. ಪ್ರಾಧಿಕಾರವು, ಪರಿಹಾರ ಅಥವಾ ನಷ್ಟ ಪರಿಹಾರದ ಮೊಬಲಗನ್ನು ನಿರ್ಧರಿಸುವಾಗ, ಕಲ್ಲುಪುಡಿ ಮಾಡುವ ಘಟಕದ ನೋಂದಾಯಿತ ಸಂಘದ ಒಬ್ಬ ಪ್ರತಿನಿಧಿಯನ್ನು ಮತ್ತು ಕಲ್ಲುಪುಡಿ ಮಾಡುವ ಘಟಕಗಳ ಕಾರ್ಮಿಕರ ಒಬ್ಬ ಪ್ರತಿನಿಧಿಯನ್ನು ಆಹ್ವಾನಿಸತಕ್ಕದ್ದು. ದೂರು ಅಥವಾ ಅರ್ಜಿಯನ್ನು ಅಥವಾ ಯುಕ್ತ ಮತ್ತು ಸಾಕಷ್ಟು ಕಾರಣಗಳಿಗಾಗಿ ಕ್ಲೇಮನ್ನು ಸಲ್ಲಿಸುವಲ್ಲಿ ಆಗಿರುವ ವಿಳಂಬವನ್ನು ಮಾಫಿ ಮಾಡಲು ಪ್ರಾಧಿಕಾರವು ಸ್ವತಂತ್ರವಾಗಿರುತ್ತದೆ.

(5) ಪ್ರಾಧಿಕಾರವು, ತಾನು ಸಂದಾಯ ಮಾಡಿದ ಮೊತ್ತದ ಜೊತೆಯಲ್ಲಿ, (4)ನೇ ಉಪಪ್ರಕರಣದಡಿಯಲ್ಲಿ ನಿರ್ಧರಿಸಿದಂಥ ಮೊತ್ತವನ್ನು ತನ್ನ ಆದೇಶದಲ್ಲಿ ನಿರ್ದಿಷ್ಟಪಡಿಸಿದ ಕಾಲದೊಳಗೆ ಅಂಥ ಬಾಧಿತರಿಗೆ ಸಂದಾಯ ಮಾಡುವಂತೆ ಲೈಸೆನ್ಸುದಾರನಿಗೆ ಕೂಡಾ ನಿರ್ದೇಶಿಸಬಹುದು. ಅದಕ್ಕೆ ತಪ್ಪಿದಲ್ಲಿ, ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಮೊತ್ತವನ್ನು, ಭೂ ಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕದ್ದು ಮತ್ತು ಲೈಸೆನ್ಸನ್ನು ರದ್ದುಪಡಿಸತಕ್ಕದ್ದು:

ಪರಂತು, ಹಾಗೆ ಹೊರಡಿಸಿದ ಆದೇಶವನ್ನು ಕೂಡಲೇ, ಸಂಬಂಧಪಟ್ಟ ಎಲ್ಲಾ ಪಕ್ಷಕಾರರಿಗೆ ತಿಳಿಸತಕ್ಕದ್ದು."

**10. 14ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 14ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**14. ವಾರ್ಷಿಕ ವರದಿ.–** ಪ್ರಾಧಿಕಾರವು ಪ್ರತಿಯೊಂದು ಸಭೆಯ ಕಾರ್ಯಕಲಾಪಗಳನ್ನು ದಾಖಲಿಸತಕ್ಕದ್ದು ಮತ್ತು ಈ ಅಧಿನಿಯಮದ ಅಡಿಯಲ್ಲಿ ಅದರ ಕಾರ್ಯ ಚಟುವಟಿಕೆಗಳ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಪ್ರತಿ ಆರ್ಥಿಕ ವರ್ಷದ ಅಂತ್ಯದ ಮೂರು ತಿಂಗಳುಗಳೊಳಗೆ ನಿಯಮಗಳಲ್ಲಿ ಗೊತ್ತುಪಡಿಸಿರುವಂಥ ರೀತಿಯಲ್ಲಿ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ಅಧಿನಿಯಮ, 2011ನ್ನು (2012ರ ಕರ್ನಾಟಕ ಅಧಿನಿಯಮ ಸಂಖ್ಯೆ.8) ಈ ಮುಂದಿನ ಕಾರಣಗಳಿಗಾಗಿ ತಿದ್ದುಪಡಿ ಮಾಡುವುದು ಅಗತ್ಯವೆಂದು ಪರಿಗಣಿಸಲಾಗಿದೆ, ಎಂದರೆ:–

1. ಅಧಿನಿಯಮದಲ್ಲಿ ವಿಧಿಸಲಾದ ಷರತ್ತುಗಳನ್ನು ವಿವಿಧ ಆಡಳಿತಾತ್ಮಕ ಕಾರಣಗಳಿಂದಾಗಿ ಕಟ್ಟುನಿಟ್ಟಾಗಿ ಪಾಲಿಸುವಲ್ಲಿ ಲೈಸೆನ್ಸಿಂಗ್ ಪ್ರಾಧಿಕಾರವು ಸುರಕ್ಷಿತ ವಲಯವನ್ನು ಘೋಷಿಸುವುದು ಕಷ್ಟವಾಗಿತ್ತು;
2. ಅಧಿನಿಯಮವು ಸುರಕ್ಷಿತ ವಲಯವನ್ನು ಗುರುತಿಸುವ, ಭೂಮಿಯನ್ನು ಖರೀದಿಸುವ ಮತ್ತು ಅದನ್ನು ಲೈಸೆನ್ಸಿಂಗ್ ಪ್ರಾಧಿಕಾರವು ಕಲ್ಲುಪುಡಿ ಮಾಡುವ ಘಟಕಗಳನ್ನು (ಕ್ರಷರ್‌ಗಳ)ಸ್ಥಾಪಿಸಲು ಅಭಿವೃದ್ಧಿಪಡಿಸುವ ಬಗ್ಗೆ ಉದ್ದೇಶಿಸಿದ್ದು, ಇದು ಸುರಕ್ಷಿತ ವಲಯವನ್ನು ಘೋಷಿಸುವಲ್ಲಿ ವಿಳಂಬವಾಗುವುದಕ್ಕೆ ಕಾರಣವಾಗಿರುತ್ತದೆ.
3. ಸುರಕ್ಷಿತ ವಲಯಗಳನ್ನು ಸಕಾಲದಲ್ಲಿ ಅಭಿವೃದ್ಧಿಪಡಿಸಲು ಸಾಧ್ಯವಾಗದಿರುವುದರಿಂದ, ಅಭಿವೃದ್ಧಿ ಹೊಂದಿದ ಸುರಕ್ಷಿತ ವಲಯಗಳಿಗೆ ಈಗಿರುವ ಕಲ್ಲುಪುಡಿ ಮಾಡುವ ಘಟಕಗಳನ್ನು (ಕ್ರಷರ್‌ಗಳು) ಸ್ಥಳಾಂತರಿಸುವುದಕ್ಕೆ ತಡೆಯೊಡ್ಡಿದೆ. ಅದೇ ರೀತಿಯ ಆಡಳಿತಾತ್ಮಕ ಸಮಸ್ಯೆಯ ಕಾರಣದಿಂದ ಹೊಸ ಕಲ್ಲುಪುಡಿ ಮಾಡುವ ಘಟಕಗಳಿಗೆ (ಕ್ರಷರ್) ಲೈಸೆನ್ಸುಗಳನ್ನು ನೀಡಲು ಸಾಧ್ಯವಾಗುವುದಿಲ್ಲ.
4. ಮೇಲಿನ ಕಾರಣಗಳೇ ಮತ್ತೆ ಘನತೆವೆತ್ತ ಉಚ್ಚ ನ್ಯಾಯಾಲಯವು, ರಿಟ್ ಅರ್ಜಿ ಸಂಖ್ಯೆ.40894–956/2012, ದಿನಾಂಕ: 27.03.2013ರಲ್ಲಿ ಆದೇಶ ಹೊರಡಿಸುವುದಕ್ಕೆ ಕಾರಣವಾಗಿದ್ದು, ಇದರಿಂದಾಗಿ ಹೆಚ್ಚಿನ ಸಂಖ್ಯೆಯ ಕಲ್ಲುಪುಡಿ ಮಾಡುವ ಘಟಕಗಳನ್ನು ಸ್ಥಗಿತಗೊಳಿಸುವಂತಾಗಿದ್ದು, ಇದರಿಂದಾಗಿ ರಾಜ್ಯದಲ್ಲಿನ ಅಭಿವೃದ್ಧಿ ಪರ ಯೋಜನೆಗಳು ಹಾಗೂ ನಿರ್ಮಾಣ ಚಟುವಟಿಕೆಗಳಿಗೆ ಜಲ್ಲಿಕಲ್ಲಿನ ಪೂರೈಕೆಯಲ್ಲಿ ಅಭಾವ ಕಂಡುಬರುತ್ತಿದೆ.
5. ಜೆಲ್ಲಿ ಕಲ್ಲುಗಳನ್ನು ಸರಬರಾಜು ಮಾಡದೇ ಇರುವುದು ಮೂಲಭೂತ ಸೌಕರ್ಯ ಯೋಜನೆಗಳು ಮತ್ತು ಕೈಗಾರಿಕಾ ಅಭಿವೃದ್ಧಿಗಳನ್ನು ಸ್ಥಗಿತಗೊಳ್ಳುವಂತೆ ಮಾಡಿದೆ.

ಈಗ ಅಧಿನಿಯಮವು ಈ ಮುಂದಿನ ಉಪಬಂಧಗಳನ್ನು ಕಲ್ಪಿಸುತ್ತದೆ:–

(1) ವೈಜ್ಞಾನಿಕ ಅಧ್ಯಯನಗಳು ಮತ್ತು ಪದ್ಧತಿಗಳ ಆಧಾರದ ಮೇಲೆ, ಪ್ರದೇಶಗಳನ್ನು ಸುರಕ್ಷಿತ ವಲಯವೆಂದು ಘೋಷಿಸುವುದಕ್ಕಾಗಿ ಷರತ್ತುಗಳನ್ನು ನಿಯಮಿಸುವುದು;

(2) ಈ ಪ್ರಸ್ತಾವಿತ ಅಧಿನಿಯಮ/ನಿಯಮಗಳಲ್ಲಿ ಗೊತ್ತುಪಡಿಸಲಾದ ಷರತ್ತುಗಳನ್ನು ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕಗಳು ಪೂರೈಸಿದರೆ, ಅವುಗಳನ್ನು ಸುರಕ್ಷಿತ ವಲಯವೆಂದು ಘೋಷಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು;

(3) ಭೂಮಿಯನ್ನು ಗುರುತಿಸುವ ಮತ್ತು ಖರೀದಿಸುವ ಹೊಣೆಯು ಅರ್ಜಿದಾರನದಾಗಿರುವುದು;

(4) "ಸುರಕ್ಷಿತ ವಲಯವೆಂದು" ಘೋಷಿಸುವುದಕ್ಕೆ ಆಧಾರವಾಗಿ, ದೂರವೊಂದನ್ನು ಮಾತ್ರ ನಿಯಮಿಸುವುದಕ್ಕೆ ಬದಲಾಗಿ, ಪರಿಸರವನ್ನು ರಕ್ಷಿಸಲು ಸುರಕ್ಷಿತ ಕ್ರಮಗಳನ್ನು ಕಡ್ಡಾಯಗೊಳಿಸುವ ಮೂಲಕ ಕಲ್ಲುಪುಡಿ ಮಾಡುವ ಘಟಕಗಳಿಂದ ಉಂಟಾಗುವ ಪರಿಸರ ಮಾಲಿನ್ಯವನ್ನು ತಡೆಗಟ್ಟುವುದಕ್ಕೆ ಆದ್ಯತೆ ನೀಡಲಾಗಿದೆ;

(5) ಲೈಸನ್ಸನ್ನು ನೀಡುವುದಕ್ಕೆ ಮೊದಲು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆಯುವುದನ್ನು ಕಡ್ಡಾಯಗೊಳಿಸಲಾಗಿದೆ;

(6) ವಿಳಂಬ ಮಾಡದೆ ಲೈಸನ್ಸನ್ನು ನೀಡಲು ಮತ್ತು ಕಲ್ಲುಪುಡಿ ಮಾಡುವ ವ್ಯವಹಾರವನ್ನು ನಿಯಂತ್ರಿಸಲು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳಿಗಾಗಿ ಲೈಸೆನ್ಸಿಂಗ್ ಮತ್ತು ನಿಯಂತ್ರಣ ಪ್ರಾಧಿಕಾರವನ್ನು ಸ್ಥಾಪಿಸುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನೆಗೆ ಸಂಬಂಧಿಸಿದ ಜ್ಞಾಪನ ಪತ್ರ**

| | |
|---|---|
| **ಖಂಡ 3:** | (i) ನೇ ಉಪಖಂಡದ ಮೂಲಕ ತಿದ್ದುಪಡಿ ಮಾಡಲು ಕೋರಲಾಗಿರುವ 3ನೇ ಪ್ರಕರಣದ (2)ನೇ ಉಪಪ್ರಕರಣವು ಪ್ರಸ್ತುತ ಇರುವ ಕಲ್ಲುಪುಡಿ ಮಾಡುವ ಘಟಕವು ಮಾಡಬೇಕಾದ ಘೋಷಣೆಯ ನಮೂನೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ7:** | ಪ್ರತ್ಯಾಯೋಜಿಸಲು ಕೋರಲಾಗಿರುವ 8ನೇ ಪ್ರಕರಣದ (3)ನೇ ಉಪಪ್ರಕರಣವು ಪ್ರಾಧಿಕಾರದ ಕಾರ್ಯಕಲಾಪಗಳ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 8:** | ಪ್ರತ್ಯಾಯೋಜಿಸಲು ಕೋರಲಾಗಿರುವ 9ನೇ ಪ್ರಕರಣದ (2)ನೇ ಉಪಪ್ರಕರಣವು,–<br>(i) (iii) ನೇ ಬಾಬ್ತು ಸುರಕ್ಷಿತ ವಲಯದ ಅನುಮತಿ ಪ್ರಮಾಣಪತ್ರದ ನಮೂನೆಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(ii) (iv) ನೇ ಬಾಬ್ತು, ಲೈಸೆನ್ಸಿನ ನಮೂನೆಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ. |
| **ಖಂಡ 9:** | ಪ್ರತ್ಯಾಯೋಜಿಸಲು ಕೋರಲಾಗಿರುವ 12ನೇ ಪ್ರಕರಣವು,–<br>(i) (1)ನೇ ಉಪಪ್ರಕರಣವು, ಬಾಧಿತರ ಪರಿಹಾರ ನಿಧಿಗೆ ಅರ್ಜಿ ಸಲ್ಲಿಸುವ ಮತ್ತು ಬಟವಾಡೆ ಮಾಡುವ ರೀತಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.<br>(ii) (2)ನೇ ಉಪಪ್ರಕರಣವು, ಬಾಧಿತರ ಪರಿಹಾರ ನಿಧಿಯ ನಿರ್ವಹಣಾ ಪ್ರಕ್ರಿಯೆಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.<br>(iii) (3)ನೇ ಉಪಪ್ರಕರಣವು, ಬಾಧಿತರ ಪರಿಹಾರ ನಿಧಿಯ ಮೊತ್ತವನ್ನು ಠೇವಣಿ ಇಡುವ ರೀತಿಗೆ ಸಂಬಂಧಿಸಿದಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 10:** | ಪ್ರತ್ಯಾಯೋಜಿಸಲು ಕೋರಲಾಗಿರುವ 14ನೇ ಪ್ರಕರಣವು ಪ್ರಾಧಿಕಾರದ ವಾರ್ಷಿಕ ವರದಿಯನ್ನು ಸಲ್ಲಿಸುವ ನಮೂನೆಗೆ ಸಂಬಂಧಿಸಿದ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಸಿದ್ದರಾಮಯ್ಯ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರ್‌ಗಳ) ನಿಯಂತ್ರಣ ಅಧಿನಿಯಮ, 2011ರ**
**(2012ರ ಕರ್ನಾಟಕ ಅಧಿನಿಯಮ ಸಂಖ್ಯೆ 8) ಉದ್ಧೃತ ಭಾಗ**

***XX XX XX***

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ವಿಷಯಕ್ಕೆ ಅಥವಾ ಸಂದರ್ಭಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು,–

***XX XX XX***

(ಬಿ) "ಸಮಿತಿ" ಎಂದರೆ, 8ನೇ ಪ್ರಕರಣದಡಿಯಲ್ಲಿ ಸ್ಥಾಪಿತವಾದ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕದ ನಿಯಂತ್ರಣ ಸಮಿತಿ;

(ಎಫ್) "ಲೈಸೆನ್ಸಿಂಗ್ ಪ್ರಾಧಿಕಾರ" ಎಂದರೆ, ಸಂಬಂಧಪಟ್ಟ ಕಂದಾಯ ಜಿಲ್ಲೆಯ ಜಿಲ್ಲಾಧಿಕಾರಿ;

***XX XX XX***

**3. ಕಲ್ಲುಪುಡಿ ಮಾಡುವ ಘಟಕಗಳನ್ನು ನಡೆಸುವವರು ಲೈಸೆನ್ಸನ್ನು ಪಡೆಯುವುದು.–** (1) ***XX XX XX***

(2) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು, ಯಾವುದೇ ಪ್ರಾಧಿಕಾರದಿಂದ ನೀಡಲಾದ ಲೈಸೆನ್ಸಿನೊಂದಿಗೆ ಕಲ್ಲುಪುಡಿ ಮಾಡುವ ಘಟಕದ ವ್ಯವಹಾರವನ್ನು ನಡೆಸುತ್ತಿರುವ ಯಾವೊಬ್ಬ ವ್ಯಕ್ತಿಯು, 6ನೇ ಪ್ರಕರಣದ ಅಡಿಯಲ್ಲಿ ಸುರಕ್ಷಿತ ವಲಯ ಎಂದು ಘೋಷಣೆಯಾದ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಲೈಸೆನ್ಸು ಪ್ರಾಧಿಕಾರಕ್ಕೆ ಈ ಅಧಿನಿಯಮದ 4ನೇ ಪ್ರಕರಣದ ಅಡಿಯಲ್ಲಿ ಲೈಸೆನ್ಸಿಗಾಗಿ ಅರ್ಜಿ ಸಲ್ಲಿಸತಕ್ಕದ್ದು.

(3) (2)ನೇ ಉಪಪ್ರಕರಣದಡಿಯಲ್ಲಿ ಸಲ್ಲಿಸಿದ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಲೈಸೆನ್ಸು ಪ್ರಾಧಿಕಾರವು, ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಘಟಕಗಳು ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಲೈಸೆನ್ಸಿನ ಮಂಜೂರಾತಿಯ ಅಥವಾ ನಿರಾಕರಣೆಯವರೆಗೆ ಅಥವಾ ಸ್ಥಳದ ಮತ್ತು

ಲೈಸೆನ್ಸಿನ ಇತರ ಷರತ್ತುಗಳ ನೆರವೇರಿಕೆಯ ಬಗ್ಗೆ ಯುಕ್ತ ಸತ್ಯಾಪನೆಯ ತರುವಾಯ, ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ, ಯಾವ ಅವಧಿಯೊಳಗೆ ಲೈಸೆನ್ಸಿಂಗ್ ಪ್ರಾಧಿಕಾರವು ಅಂಥ ಅರ್ಜಿಯನ್ನು ವಿಲೆ ಮಾಡತಕ್ಕದ್ದೋ ಆ ಮೂರು ತಿಂಗಳುಗಳವರೆಗೆ ಕಾರ್ಯನಿರ್ವಹಿಸುವುದಕ್ಕೆ ಅನುಮತಿಸಬಹುದು.

(4) (3)ನೇ ಉಪಪ್ರಕರಣದಡಿಯಲ್ಲಿ ಲೈಸೆನ್ಸನ್ನು ನೀಡಿದ ತರುವಾಯ, ಅಸ್ತಿತ್ವದಲ್ಲಿರುವ ಕಲ್ಲುಪುಡಿ ಮಾಡುವ ಅಂಥ ಘಟಕವನ್ನು ಆರು ತಿಂಗಳುಗಳೊಳಗೆ ಸುರಕ್ಷಿತ ವಲಯಕ್ಕೆ ಸ್ಥಳಾಂತರಿಸತಕ್ಕದ್ದು.

**4. ಲೈಸೆನ್ಸಿಗೆ ಅರ್ಜಿ.**– (1) ***XX*** ***XX*** ***XX***

(2) ಲೈಸೆನ್ಸಿನ ಮಂಜೂರಾತಿ ಅಥವಾ ನವೀಕರಣಕ್ಕಾಗಿನ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಲೈಸೆನ್ಸಿಂಗ್ ಪ್ರಾಧಿಕಾರವು, ಸ್ಥಳದ ಪರಿಶೀಲನೆಯನ್ನು ಮಾಡಿಸತಕ್ಕದ್ದು ಮತ್ತು ಲೈಸೆನ್ಸಿನ ಇತರ ಷರತ್ತುಗಳ ಪೂರೈಕೆಯನ್ನು ಸತ್ಯಾಪನೆ ಮಾಡಿದ ತರುವಾಯ, ಅರ್ಜಿಯ ದಿನಾಂಕದಿಂದ ಮೂರು ತಿಂಗಳುಗಳೊಳಗೆ, ಅರ್ಜಿಯನ್ನು ಮಂಜೂರು ಮಾಡಬಹುದು ಅಥವಾ ತಿರಸ್ಕರಿಸಬಹುದು.

**5. ಲೈಸೆನ್ಸಿನ ಕಾಲಾವಧಿ.**– ಒಂದು ಲೈಸೆನ್ಸು ಮೂರು ವರ್ಷದ ಅವಧಿಯವರೆಗೆ ಸಿಂಧುವಾಗಿರತಕ್ಕದ್ದು ಮತ್ತು ಈ ಅಧಿನಿಯಮದ ಅಥವಾ ಅದರಡಿಯಲ್ಲಿ ರಚಿಸಲಾದ ನಿಯಮಗಳ ಅಡಿಯಲ್ಲಿ ಹೇಳಲಾದ ಷರತ್ತುಗಳನ್ನು ಪೂರೈಸುವುದಕ್ಕೆ ಒಳಪಟ್ಟು ಮೂರು ವರ್ಷಗಳ ಮತ್ತಷ್ಟು ಅವಧಿಗಾಗಿ ನವೀಕರಿಸಬಹುದು.

***XX*** ***XX*** ***XX***

**6. ಲೈಸೆನ್ಸಿನ ಮಂಜೂರಾತಿಗಾಗಿ ಷರತ್ತುಗಳು.**– ಈ ಮುಂದಿನ ಷರತ್ತುಗಳಿಗೆ ಒಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಲೈಸೆನ್ಸನ್ನು ಮಂಜೂರು ಮಾಡತಕ್ಕದ್ದು, ಎಂದರೆ:–

(1) ಸುರಕ್ಷಿತ ವಲಯದಿಂದ ಹೊರಗೆ ಕಲ್ಲುಪುಡಿ ಮಾಡುವ ಘಟಕವನ್ನು ಸ್ಥಾಪಿಸತಕ್ಕದ್ದಲ್ಲ.

(2) ಸುರಕ್ಷಿತ ವಲಯವು,–

(ಎ) ರಾಷ್ಟ್ರೀಯ ಹೆದ್ದಾರಿಗಳು, ವಸತಿ ಪ್ರದೇಶಗಳು, ದೇವಾಲಯಗಳು, ಶಾಲೆಗಳು ಮತ್ತು ನದಿಯಿಂದ ಎರಡು ಕಿಲೋಮೀಟರುಗಳ ದೂರ;

(ಬಿ) ರಾಜ್ಯ ಹೆದ್ದಾರಿಯಿಂದ ಒಂದೂವರೆ ಕಿಲೋಮೀಟರುಗಳ ದೂರ;

(ಸಿ) ಸಂಪರ್ಕ ರಸ್ತೆಗಳಿಂದ ಐದು ನೂರು ಮೀಟರುಗಳ ದೂರ;

(ಡಿ) ಪೌರನಿಗಮಗಳ ಪರಿಮಿತಿಗಳಿಂದ ಎಂಟು ಕಿಲೋಮೀಟರುಗಳ ದೂರ;

(ಇ) ಜಿಲ್ಲಾ ಕೇಂದ್ರ ಸ್ಥಾನಗಳ ಪರಿಮಿತಿಗಳಿಂದ ನಾಲ್ಕು ಕಿಲೋಮೀಟರುಗಳು ದೂರ;

(ಎಫ್) ತಾಲ್ಲೂಕು ಕೇಂದ್ರ ಸ್ಥಾನಗಳ ಗಡಿ ಪರಿಮಿತಿಗಳಿಂದ ಎರಡು ಕಿಲೋಮೀಟರುಗಳ ದೂರ;

(ಜಿ) ಸರ್ಕಾರದ ದಾಖಲೆಗಳಲ್ಲಿ ಯಾವುದೇ ಜನವಸತಿ ಗ್ರಾಮ ಅಥವಾ ಅರಣ್ಯ ಎಂದು ದಾಖಲಾದ ಪರಿಮಿತಿಗಳಿಂದ ಅಥವಾ ಕಂದಾಯ ದಾಖಲೆಗಳಲ್ಲಿ ವ್ಯವಸಾಯ ಯೋಗ್ಯ ಭೂಮಿ ಎಂದು ತೋರಿಸಿರುವ ಯಾವುದೇ ಖಾಸಗಿ ಭೂಮಿಯ ಮಿತಿಗಳಿಂದ ಒಂದು ಕಿಲೋಮೀಟರು ದೂರ,

– ಇರುವ ಸ್ಥಳದೊಳಗೆ ಇರತಕ್ಕದ್ದು.

(3) ಐವತ್ತು ಕಿಲೋಮೀಟರುಗಳ ವ್ಯಾಸದೊಳಗೆ ಯಾವುದೇ ಎರಡು ಸುರಕ್ಷಿತ ವಲಯಗಳು ಇರತಕ್ಕದ್ದಲ್ಲ.

(4) ಲೈಸೆನ್ಸಿಂಗ್ ಪ್ರಾಧಿಕಾರವು, ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗೆ, ಅವುಗಳ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶ ಮತ್ತು ಮಿತಿಗಳನ್ನು ನಿರ್ದಿಷ್ಟಪಡಿಸಿ ಸುರಕ್ಷಿತ ವಲಯಗಳನ್ನು ಗುರುತಿಸತಕ್ಕದ್ದು ಮತ್ತು ಅಧಿಸೂಚನೆಯ ಮೂಲಕ ಹಾಗೆಂದು ಘೋಷಿಸತಕ್ಕದ್ದು.

ಪರಂತು, ಲೈಸೆನ್ಸಿಂಗ್ ಪ್ರಾಧಿಕಾರವು ಕೆಲವು ಅಸಾಧಾರಣ ಸಂದರ್ಭಗಳಲ್ಲಿ ಮತ್ತು ಲಿಖಿತದಲ್ಲಿ ದಾಖಲಿಸಬೇಕಾದ ಕಾರಣಗಳಿಗಾಗಿ, ಸುರಕ್ಷಿತ ವಲಯಗಳ ಘೋಷಣೆಯ ಉದ್ದೇಶಕ್ಕೆ (2)ನೇ ಉಪ ಪ್ರಕರಣದಲ್ಲಿ ಮತ್ತು (3)ನೇ ಉಪ–ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಷರತ್ತು ಅಥವಾ ಷರತ್ತುಗಳನ್ನು ಸಡಿಲಗೊಳಿಸಬಹುದು.

(5) ಲೈಸೆನ್ಸಿಂಗ್ ಪ್ರಾಧಿಕಾರವು, ಮಾಲಿನ್ಯ ನಿಯಂತ್ರಣ ಮಂಡಳಿಗೆ, ಅದರ ಪ್ರಮಾಣೀಕರಣಕ್ಕಾಗಿ (4)ನೇ ಉಪಪ್ರಕರಣದಡಿಯಲ್ಲಿ ಸುರಕ್ಷಿತ ವಲಯದ ಘೋಷಣೆಯ ಪ್ರಸ್ತಾವವನ್ನು ಕಳುಹಿಸತಕ್ಕದ್ದು. ಮಾಲಿನ್ಯ ನಿಯಂತ್ರಣ ಮಂಡಳಿಯು ಪ್ರಸ್ತಾವವನ್ನು ಸ್ವೀಕರಿಸಿದ ಮೇಲೆ ಅಥವಾ ಪ್ರಸ್ತಾವದ ದಿನಾಂಕದಿಂದ ಮೂರು ತಿಂಗಳುಗಳು ಕಳೆದ ತರುವಾಯ, ಲೈಸೆನ್ಸಿಂಗ್ ಪ್ರಾಧಿಕಾರವು ಯಾವುದೇ ಪತ್ರವನ್ನು ಸ್ವೀಕರಿಸಿರದಿದ್ದಲ್ಲಿ, ಲೈಸೆನ್ಸಿಂಗ್ ಪ್ರಾಧಿಕಾರವು ಅಧಿಸೂಚನೆಯ ಮೂಲಕ ಪ್ರಸ್ತಾವಕ್ಕನುಸಾರವಾಗಿ ಸುರಕ್ಷಿತ ವಲಯವನ್ನು ಘೋಷಿಸತಕ್ಕದ್ದು.

(6) ರಾಜ್ಯ ಸರ್ಕಾರಕ್ಕೆ ಅಥವಾ ಸಂದರ್ಭಾನುಸಾರವಾಗಿ ಪಂಚಾಯತಿಗೆ ಸೇರಿದ ಕಲ್ಲುಪುಡಿ ಮಾಡುವ ಘಟಕವನ್ನು ಒಳಗೊಂಡಂತೆ ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವು, ಕನಿಷ್ಠ ಒಂದು ಎಕರೆಯ ಪ್ರದೇಶದಲ್ಲಿ ಇರತಕ್ಕದ್ದು.

(7) ಪ್ರತಿಯೊಂದು ಘಟಕವು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಕಾಲಕಾಲಕ್ಕೆ ನಿಯಮಿಸಬಹುದಾದ ಮಾಲಿನ್ಯ ನಿಯಂತ್ರಣ ಕ್ರಮಗಳು ಅಥವಾ ಅಂಥ ಇತರ ಸುರಕ್ಷಿತ ಕ್ರಮಗಳನ್ನು ಪಾಲಿಸಕ್ಕದ್ದು.

(8) ಪ್ರತಿಯೊಂದು ಘಟಕವು ಶಬ್ಧ (ವಿನಿಯಮಗಳು ಮತ್ತು ನಿಯಂತ್ರಣ) ನಿಯಮಗಳು, 2000 ಕ್ಕೆ ಅನುಸಾರವಾಗಿರತಕ್ಕದ್ದು.

(9) ಘಟಕವು ವಾಯು (ಮಾಲಿನ್ಯ ತಡೆಗಟ್ಟುವ ಮತ್ತು ನಿಯಂತ್ರಿಸುವ) ಅಧಿನಿಯಮ, 1981 ಮತ್ತು ಪರಿಸರ ಸಂರಕ್ಷಣ ಅಧಿನಿಯಮ, 1986 ಮತ್ತು ಅವುಗಳಡಿಯಲ್ಲಿ ರಚಿಸಲಾದ ನಿಯಮಗಳ ಉಪಬಂಧಗಳನ್ನು ಪಾಲಿಸತಕ್ಕದ್ದು.

**XX** **XX** **XX**

**8. ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿಯ ಸ್ಥಾಪನೆ.–** (1) ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಮತ್ತು ಅಂದಿನಿಂದ ಪ್ರತಿಯೊಂದು ಕಂದಾಯ ಜಿಲ್ಲೆಯಲ್ಲಿ, ಈ ಮುಂದಿನವರನ್ನು ಒಳಗೊಂಡಿರುವ ಒಂದು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಸಮಿತಿಯನ್ನು ಸ್ಥಾಪಿಸತಕ್ಕದ್ದು, ಎಂದರೆ:–

| | | |
|---|---|---|
| (ಎ) | ಜಿಲ್ಲೆಯ ಜಿಲ್ಲಾಧಿಕಾರಿ | ಅಧ್ಯಕ್ಷರು |
| (ಬಿ) | ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ | ಪದನಿಮಿತ್ತ ಸದಸ್ಯ |
| (ಸಿ) | ಜಿಲ್ಲೆಯ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ | ಪದನಿಮಿತ್ತ ಸದಸ್ಯ |
| (ಡಿ) | ಜಿಲ್ಲೆಯ ಉಪ ಅರಣ್ಯ ಸಂರಕ್ಷಣಾಧಿಕಾರಿ | ಪದನಿಮಿತ್ತ ಸದಸ್ಯ |
| (ಇ) | ಜಿಲ್ಲೆಯ ಪರಿಸರ ಅಧಿಕಾರಿ | ಪದನಿಮಿತ್ತ ಸದಸ್ಯ |
| (ಎಫ್) | ಜಿಲ್ಲೆಯ ಅಗ್ನಿಶಾಮಕ ದಳದ ಸಹಾಯಕ ನಿರ್ದೇಶಕರು | ಪದನಿಮಿತ್ತ ಸದಸ್ಯ |
| (ಜಿ) | ಜಿಲ್ಲೆಯ ಕಾರ್ಖಾನೆಗಳು ಮತ್ತು ಬಾಯ್ಲರುಗಳ ಸಹಾಯಕ ನಿರ್ದೇಶಕರು | ಪದನಿಮಿತ್ತ ಸದಸ್ಯ |
| (ಎಚ್) | ಜಿಲ್ಲೆಯ ಪ್ರಭಾರದಲ್ಲಿರುವ ಕಾರ್ಮಿಕ ಅಧಿಕಾರಿ | ಪದನಿಮಿತ್ತ ಸದಸ್ಯ |
| (ಐ) | ಜಿಲ್ಲಾ ಆರೋಗ್ಯಾಧಿಕಾರಿ | ಪದನಿಮಿತ್ತ ಸದಸ್ಯ |
| (ಜೆ) | ಅಧ್ಯಕ್ಷರು ನೇಮಕ ಮಾಡಬೇಕಾದ ಗಣಿ ಮತ್ತು ಭೂಗರ್ಭ ಇಲಾಖೆಯ ಉಪನಿರ್ದೇಶಕ/ಹಿರಿಯ ಭೂಗರ್ಭ ವಿಜ್ಞಾನಿ | ಸದಸ್ಯ ಕಾರ್ಯದರ್ಶಿ |

**XX** **XX** **XX**

**9. ಲೈಸೆನ್ಸ್ ನೀಡಲಾಗಿರುವ ಕಲ್ಲುಪುಡಿ ಮಾಡುವ ಘಟಕಗಳ ಪರಿಶೀಲನೆ ಮತ್ತು ನಿಯಂತ್ರಣ.–** ಜಿಲ್ಲಾಧಿಕಾರಿ ಅಥವಾ ಜಿಲ್ಲಾಧಿಕಾರಿಯು ಪ್ರಾಧಿಕರಿಸಿದ ಒಬ್ಬ ಅಧಿಕಾರಿಯು ಪ್ರತಿಯೊಂದು ಕಲ್ಲುಪುಡಿ ಮಾಡುವ ಘಟಕವನ್ನು ಕೊನೆ ಪಕ್ಷ ವರ್ಷಕ್ಕೊಮ್ಮೆ ಪರಿಶೀಲನೆ ಮಾಡತಕ್ಕದ್ದು.

**XX** **XX** **XX**

**12. ಬಾಧಿತರಿಗಾಗಿ ಪರಿಹಾರ ನಿಧಿ.–** (1) ಸಮಿತಿಯು, ಬಾಧಿತರಿಗಾಗಿ ಪರಿಹಾರ ನಿಧಿ ಎಂದು ಕರೆಯಲಾಗುವ ಪ್ರತ್ಯೇಕ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ನಿರ್ವಹಿಸತಕ್ಕದ್ದು ಮತ್ತು ತಾನು ವಿಧಿಸಿದ ಲೈಸೆನ್ಸ್ ಶುಲ್ಕಗಳು, ಜುಲ್ಮಾನೆಗಳು ಮತ್ತು ದಂಡಗಳ ರೂಪದಲ್ಲಿ ಸ್ವೀಕರಿಸಿದ ಎಲ್ಲಾ ಹಣವನ್ನು ಇದಕ್ಕೆ ಜಮೆ ಮಾಡತಕ್ಕದ್ದು. ಇದನ್ನು, ಈ ಅಧಿನಿಯಮ ಮತ್ತು ಇದರಡಿಯಲ್ಲಿ ರಚಿಸಿದ ನಿಯಮಗಳಿಗನುಸಾರವಾಗಿ ಹೊಂದಿರತಕ್ಕದ್ದು, ವಿನಿಯೋಗಿಸತಕ್ಕದ್ದು ಮತ್ತು ವಿತರಿಸತಕ್ಕದ್ದು.

(2) ಸಮಿತಿಯ ಅಧ್ಯಕ್ಷ ಮತ್ತು ಸದಸ್ಯ ಕಾರ್ಯದರ್ಶಿಯು ಈ ಅಧಿನಿಯಮದಡಿಯಲ್ಲಿ ರಚಿಸಲಾದ ನಿಯಮಗಳಿಗನುಸಾರವಾಗಿ ಬಾಧಿತರಿಗಾಗಿ ಪರಿಹಾರ ನಿಧಿಯನ್ನು ನಿರ್ವಹಿಸತಕ್ಕದ್ದು.

(3) ಬಾಧಿತರಿಗಾಗಿ ಪರಿಹಾರ ನಿಧಿಯನ್ನು, ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ನಿಯಮಿಸಬಹುದಾದ ರೀತಿಯಲ್ಲಿ ಇಡತಕ್ಕದ್ದು.

(4) ಸಮಿತಿಯು, ಕಲ್ಲು ಪುಡಿ ಮಾಡುವ ಘಟಕದಿಂದ ಆರೋಗ್ಯದ ತೊಂದರೆ ಉಂಟಾದ ಕಾರಣದ ಮೇಲೆ, ಆರೋಗ್ಯದ ತೊಂದರೆ ಉಂಟಾದ ದಿನಾಂಕದಿಂದ ಮೂರು ತಿಂಗಳ ಅವಧಿಯೊಳಗೆ ಬಾಧಿತರಾದವರಿಂದ ದೂರುಗಳು ಅಥವಾ ಅರ್ಜಿಗಳು ಅಥವಾ ಕ್ಲೇಮುಗಳನ್ನು ಸ್ವೀಕರಿಸತಕ್ಕದ್ದು ಮತ್ತು ಅಂಥ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಹಾಗೂ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಮೂರು ತಿಂಗಳುಗಳ ಅವಧಿಯೊಳಗೆ ಪ್ರತಿಯೊಬ್ಬ ಅರ್ಜಿದಾರನಿಗೆ ನೀಡಬೇಕಾದ ಪರಿಹಾರದ ಮೊತ್ತವನ್ನು ನಿಯಮಿಸಬಹುದಾದ ನಿಯಮಗಳಿಗನುಸಾರವಾಗಿ ನಿರ್ಧರಿಸತಕ್ಕದ್ದು:

ಪರಂತು ಸಮಿತಿಯು, ದೂರು ಅಥವಾ ಅರ್ಜಿಯನ್ನು ಯುಕ್ತ ಸಮಯದಲ್ಲಿ ಸಲ್ಲಿಸದಿರುವುದಕ್ಕೆ ಸೂಕ್ತ ಕಾರಣವನ್ನು ಫಿರ್ಯಾದುದಾರ ಅಥವಾ ಅರ್ಜಿದಾರನು ಹೊಂದಿದ್ದನೆಂಬುದನ್ನು ಮನಗಂಡಲ್ಲಿ, ಮೂರು ತಿಂಗಳು ಮೀರಿದ ತರುವಾಯವೂ ಅಂಥ ದೂರುಗಳು ಅಥವಾ ಅರ್ಜಿಗಳನ್ನು ಪುರಸ್ಕರಿಸಬಹುದು.

(5) ಅಲ್ಲದೆ ಸಮಿತಿಯು, (4)ನೇ ಉಪಪ್ರಕರಣದಡಿಯಲ್ಲಿ ನಿರ್ಧರಿಸಲಾದಂಥ ಮೊತ್ತವನ್ನು, ತಾನು ಸಂದಾಯ ಮಾಡಿದ ಮೊತ್ತಕ್ಕೆ ಹೆಚ್ಚುವರಿಯಾಗಿ, ಬಾಧಿತ ವ್ಯಕ್ತಿಗೆ ಆದೇಶದ ದಿನಾಂಕದಿಂದ ಎರಡು ತಿಂಗಳೊಳಗೆ ಸಂದಾಯ ಮಾಡುವಂತೆ ಲೈಸನ್ಸುದಾರನಿಗೆ ನಿರ್ದೇಶನ ನೀಡಬಹುದು, ಇದಕ್ಕೆ ತಪ್ಪಿದಲ್ಲಿ ಲೈಸನ್ಸ್‌ನ್ನು ರದ್ದುಪಡಿಸತಕ್ಕದ್ದು.

**XX** **XX** **XX**

**14. ವಾರ್ಷಿಕ ವರದಿ.–** ಸಮಿತಿಯು, ಈ ಅಧಿನಿಯಮದ ಅಡಿಯಲ್ಲಿ ತನ್ನ ಚಟುವಟಿಕೆಗಳ ವರದಿಯನ್ನು ಪ್ರತಿವರ್ಷಕ್ಕಾಗಿ ತಯಾರಿಸತಕ್ಕದ್ದು ಮತ್ತು ಅದನ್ನು ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಅಂಥ ದಿನಾಂಕದಂದು ಅಥವಾ ಅದಕ್ಕೆ ಮುಂಚೆ ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯ ಸರ್ಕಾರವು ಅದನ್ನು ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**XX** **XX** **XX**

## *KARNATAKA LEGISLATIVE ASSEMBLY*
## *FOURTEENTH LEGISLATIVE ASSEMBLY*
## *SECOND SESSION*

# *THE KARNATAKA REGULATION OF STONE CRUSHERS (AMENDMENT) BILL, 2013*
### *(L.A. Bill No. 24 of 2013)*

A Bill to amend the Karnataka Regulation of Stone Crushers Act, 2011.

Whereas it is expedient to amend the Karnataka Regulation of Stone Crushers Act, 2011 (Karnataka Act 08 of 2012) for the purposes hereinafter appearing;

Be it enacted by the Karnataka State Legislature in the sixty fourth year of the Republic of India, as follows:-

***1. Short title and commencement.-*** (1) This Act may be called the Karnataka Regulation of Stone Crushers (Amendment) Act, 2013.

(2) It shall come into force at once.

***2. Amendment of section 2.-***In the Karnataka Regulation of Stone Crushers Act, 2011 (Karnataka Act 08 of 2012) (hereinafter referred to as the principal Act), in section 2,-

(i) for clause (b), the following shall be substituted, namely:-

"(b) ''Authority'' means the District Stone Crushers Licensing and Regulation Authority constituted under section 8;”

(ii) for clause (f), the following shall be substituted, namely:-

"(f) "Licensing Authority" means the Authority defined in clause (b);"

***3. Amendment of section 3.-*** In section 3 of the Principal Act,-

(i) in sub-section (2), for the words "for a license under section 4 of the Act within three months from the date of declaration of safer zone under section 6;” the words “with a declaration in the prescribed form that the existing area conforms to the condition stipulated in Section 6 or any other suitable area conforming to the conditions stipulated under section 6, within three months from the date of commencement of the Karnataka Regulation of Stone Crushers (Amendment) Act, 2013 for a license under section 4 of the Act” shall be substituted.

(ii) for sub-section (3), the following shall be substituted, namely:-

"(3) on receipt of the application along with declaration under sub-section (2), the existing stone crusher units may be allowed to function till the grant or refusal of Certificate of compliance of safer zone under sub-section (4) by the Authority or till three months from the date of application, whichever is earlier.”

(iii) for sub-section (4), the following shall be substituted, namely:-

“(4) on receipt of application under sub-section (2) or for renewal of license, the Licensing Authority shall cause joint inspection of the location under sub-section (3) of section 6 and declaration of safer zone, the licensing authority shall issue a certificate of compliance of safer zone to the applicant. If the area specified in the declaration is not declared as safer zone the licensing authority shall reject the application for the reasons to be recorded in writing and inform the applicant accordingly. However, applicant is at liberty to make fresh application for alternate location. provided further that if the application is rejected, the applicant shall stop the operation of stone crusher forthwith and submit fresh application to the licensing authority.

(5) If the Licensing Authority issues a certificate of compliance of safer zone, the applicant shall approach the Karnataka State Pollution Control Board and obtain Consent for Operation (CFO) and submit the same to the Licensing Authority.

(6) The Licensing Authority, after production of Consent for Operation (CFO) from the Karnataka State Pollution Control Board by the applicant, shall issue license subject to compliance of conditions specified in section 6A.

(7) If the person having existing stone crusher gets any other place certified as safer zone by the Licensing Authority other than the presently working place, such crusher shall be shifted to such safer zone so certified within one year from the date of grant of certificate of compliance of safer zone under sub-section (4).”

***4. Amendment of section 4. -*** In section 4 of the Principal Act,-

(i) for sub-section (2), the following shall be substituted, namely:-

"(2) on receipt of application for grant or renewal of license, the Licensing Authority shall cause joint inspection of the location under sub-section (3) of section 6. After declaration of safer zone, the licensing authority shall issue a certificate of consent of safer zone to the applicant. If the area proposed in the application is not declared as safer zone, the licensing authority shall reject the application for the reasons to be recorded in writing and inform the applicant accordingly. However, applicant is at liberty to make fresh application for alternate location.

(3) If the Licensing Authority issues a certificate of consent of safer zone, the applicant shall approach The Karnataka State Pollution Control Board and obtain Consent for Operation (CFO) and submit the same to the Licensing Authority."

***5.Amendment of section 5.-*** In section 5 of the Principal Act, for the words "three years" occuring in two places, the words "five years" shall be substituted.

***6. Amendment of section 6.-*** For section 6 of the Principal Act, the following shall be substituted, namely:-

***"6. Conditions for declaring Safer Zone***.- The declaration of safer zone for stone crushers under this Act, shall be subject to the following conditions, namely:-

(1) The safer zone shall not be located within,-

(a) One hundred meter from the National Highways, State Highways (from the centre line of roads).

(b) Fifty meters from Major district roads or other roads;

(c) Five hundred meter from revenue village, temples, schools;

(d) The boundary of Municipal Corporations, City Municipal Corporation, Town Municipal Council;

(2) Each stone crusher unit shall be located in a minimum area of one acre of land.

(3) The licensing Authority shall, within a period of three months from the date of receiving application, verify the above conditions through joint inspection from the concerned officers of Mines and Geology, Revenue, Forest department and Environmental officer, Karnataka State Pollution Control Board and declare safer zone within their jurisdiction by notification, specifying the area and its limits.

Provided that the Licensing Authority shall declare the safer zone for existing stone crusher within one month in any case not later than three months from the date of receipt of application.

***6A. Conditions for grant of License. –*** (1)No License shall be issued for stone crushers outside the safer zone.

(2) The Licensing Authority on production of Consent for Operation (CFO) certificate issued by the Karnataka State Pollution Control Board shall grant license to the applicant in such form as may be prescribed. The licensee shall adhere to the following conditions, namely:-

(1) each unit shall abide by the provisions of the Air (Prevention and Control of Pollution) Act, 1981 and the Environmental Protection Act, 1986 and rules made there under as prescribed by KSPCB from time to time.

(2) each unit shall conform to the Noise (Regulations and Control) Rules, 2000.

(3) an individual or cluster of stone crushers shall provide 15 to 20 feet wall/GI sheet protection on all the three sides (parallel to National highway or State highway or major district road or village habitation or temple or school as the case may be) in addition to the air pollution control measures.

(4) The applicant has to,-

(a) adopt necessary dust containment system like building enclosures to the major dust emission sources to prevent dust going out of the place.

(b) construct enclosures of G.I.sheets (1.66 mm and 1.25 mm thick) and supported by angle structures to withstand strong wind.

(c) give the roof a gradual slope/curvature so as to prevent accumulation of water.

(d) Provide material transfer point such as hopper bottom/product unloading conveyor to be covered suitably to prevent dust release into the atmosphere.

(e) ensure that where complete enclosures are not possible such as openings in jaw crushers side and bottom they are to be covered suitably with GI sheets/ rubber flap or any other material to prevent dust release into the atmosphere.

(f) ensure that telescopic chutes are provided at product unloading conveyor to prevent dust release into the atmosphere during free fall of material from height. These chutes can be adjusted in length according to size of the heap.

(g) provide openings in the enclosures over Shafter motor driver conveyor belts etc., with rubber flaps (wherever possible) to prevent release of dust.

(h) provide effective dust suppression system comprising of spraying of fine water mist through special nozzles shall be carried out over the dust generation sources to suppress the dust cloud.

(i) make periodical cleaning of water spray nozzles to avoid choking.

(j) provide as an occupational safety, nose masks to all the workers.

(5) All stone crushing units shall provide adequate green belt comprising evergreen high foliage type of trees like neem, tamarind, gold mohar, flame of the forest and any other local varieties to restrict the spread of particulate matter."

***7. Amendment to section 8.-*** For section 8 of the Principal Act, the following shall be substituted, namely :-

***"8. Establishment of the District Stone Crushers Licensing and Regulation Authority***.- (1)On and from the date of commencement of the Karnataka Regulation of Stone Crushers (Amendment) Act, 2013 there shall be established in each of the revenue District, the District Stone Crushers Licensing and Regulation Authority consisting of the following members, namely:-

| | | |
|---|---|---|
| (a) | The Deputy Commissioner of the District | - Chairman |
| (b) | The Superintendent of Police of the District | - Member ex-officio |
| (c) | The Chief Executive Officer of Zilla Panchayat of the District | – Member ex-officio |
| (d) | The Deputy Conservator of Forest of the concerned jurisdiction | - Member ex -officio |
| (e) | All Assistant Commissioners of the District, Revenue Department | - Member ex- officio |
| (f) | The Environmental officer, Karnataka State Pollution Control Board | – Member ex-officio |
| (g) | The Deputy Director/Senior Geologist, Department of Mines and Geology | – Member Secretary |

(2) The Member Secretary shall receive all the applications for grant of license and place them before the Authority for decision.

(3) The procedure of transaction of business of the Authority shall be such as may be prescribed."

***8. Amendment of section 9.-*** For section 9 of the Principal Act, the following shall be substituted, namely:-

"***9. Duties of the Authority.-*** (1) The Authority shall meet once in a month and meeting shall be called by the member secretary. If for any reason it is necessary, the member secretary may with the approval of the chairman, convene the meeting at any time. One third of the total members shall form the quorum for the meetings.

(2) The duties of the Authority shall be,-

(i) to cause Joint Inspection of stone crushers and obtain report by the concerned officers of Mines and Geology, Revenue, Forest departments and KSPCB to verify the conditions stipulated for declaring the safer zone;

(ii) to declare the safer zone, which are conforming the norms;

(iii) to issue Certificate of compliance of safer zone in such form as may be prescribed to the applicants having stone crusher located in declared safer zone;

(iv) to issue License in the form as may be prescribed;

(v) to supervise licensed premises and report any violations to the chairman;

(vi) to suspend/cancel the license for non-compliance of the conditions;

(vii) to invite any of the officers of any other departments of Government to assist the Authority on any specific issues like computation of compensation, provide technical advice etc.,;

(viii) to follow the orders and guidelines issued by the Government from time to time; and

